# ಕಡಲಬಾಳು ಆಂಜನೇಯಸ್ವಾಮಿ
## ಸಾಂಸ್ಕೃತಿಕ ಅಧ್ಯಯನ

ಮಾಸ್ಟರ್ ಆಫ್ ಫಿಲಾಸಫಿ (ಎಂ.ಫಿಲ್) ಪದವಿಯ ಆಂಶಿಕ ಅವಶ್ಯಕತೆಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಕಿರು ಪ್ರಬಂಧ

ಸಂಶೋಧಕ
ಉಮಾಪತಿ ಬಿ.

ಮಾರ್ಗದರ್ಶಕರು
ಡಾ. ಮಂಜುನಾಥ ಬೇವಿನಕಟ್ಟಿ





ಜಾನಪದ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩೨೭೬

೨೦೦೧ - ೨೦೦೨

# ಕಡಲಬಾಳು ಆಂಜನೇಯಸ್ವಾಮಿ

## ಸಾಂಸ್ಕೃತಿಕ ಅಧ್ಯಯನ

ಮಾಸ್ಟರ್ ಆಫ್ ಫಿಲಾಸಫಿ (ಎಂ.ಫಿಲ್) ಪದವಿಯ ಆಂಶಿಕ ಅವಶ್ಯಕತೆಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಸಂಪ್ರಬಂಧ

ಸಂಶೋಧಕ
ಉಮಾಪತಿ ಬಿ.

ಮಾರ್ಗದರ್ಶಕರು
ಡಾ. ಮಂಜುನಾಥ ಬೇವಿನಕಟ್ಟಿ





ಜಾನಪದ ಅಧ್ಯಯನ ವಿಭಾಗ
ಸಮಾಜವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೦೦೩



# ಪ್ರಮಾಣ ಪತ್ರ

ಕಡಲಬಾಳು ಆಂಜನೇಯಸ್ವಾಮಿ - ಸಾಂಸ್ಕೃತಿಕ ಅಧ್ಯಯನ ಎಂಬ ಶೀರ್ಷಿಕೆಯ ಸಂಶೋಧನ ಪ್ರಬಂಧವನ್ನು ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಲು ಡಾ. ಮಂಜುನಾಥ ಬೇವಿನಕಟ್ಟಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಈ ಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಪದವಿಗಾಗಲಿ ಅಥವಾ ಇತರೆ ಯಾವುದೇ ಉದ್ದೇಶಗಳಿಗಾಗಲಿ ಬಳಸಿ ಕೊಂಡಿರುವುದಿಲ್ಲವೆಂದು ಘೋಷಿಸುತ್ತೇನೆ.

ಸ್ಥಳ : ವಿದ್ಯಾರಣ್ಯ
ದಿನಾಂಕ : ೩೦.೪.೨೦೦೨

(ಉಮಾಪತಿ. ಬಿ)
ಎಂ. ಫಿಲ್. ವಿದ್ಯಾರ್ಥಿ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ದೃಢೀಕರಣ ಪತ್ರ

ಶ್ರೀ ಉಮಾಪತಿ ಬಿ. ಇವರು ಕಡಲಬಾಳು ಆಂಜನೇಯಸ್ವಾಮಿ - ಸಾಂಸ್ಕೃತಿಕ ಅಧ್ಯಯನ ಎಂಬ ಶೀರ್ಷಿಕೆಯ ಸಂಶೋಧನ ಪ್ರಬಂಧವನ್ನು ನನ್ನ ಸಲಹೆ ಮತ್ತು ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಲಿ ಬಳಸಿಕೊಂಡಿರುವುದಿಲ್ಲ.

ದಿನಾಂಕ : ೩೦.೪.೨೦೦೨
ಸ್ಥಳ : ವಿದ್ಯಾರಣ್ಯ

(ಮಂಜುನಾಥ ಬೇವಿನಕಟ್ಟಿ)
ಮಾರ್ಗದರ್ಶಕರು ಮತ್ತು ಮುಖ್ಯಸ್ಥರು
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಕೃತಜ್ಞತೆಗಳು

- ಕನ್ನಡ ವಿಶ್ವವಿದ್ಯಾಲಯದಲ್ಲಿ ಎಂ.ಫಿಲ್ ಅಧ್ಯಯನ ಮಾಡಲು ಅವಕಾಶ ಕಲ್ಪಿಸಿಕೊಟ್ಟ ಮಾನ್ಯ ಕುಲಪತಿಗಳಾದ ಡಾ.ಎಚ್.ಜೆ. ಲಕ್ಕಪ್ಪಗೌಡ ಅವರಿಗೆ, ಕುಲಸಚಿವರಾದ ಡಾ.ಕೆ.ವಿ. ನಾರಾಯಣ ಅವರಿಗೆ, ಅಧ್ಯಯನಾಂಗ ನಿರ್ದೇಶಕರಾದ ಡಾ.ಹಿ.ಚಿ. ಬೋರಲಿಂಗಯ್ಯ ಅವರಿಗೆ ನಾನು ಕೃತಜ್ಞನಾಗಿರುತ್ತೇನೆ.
- ಈ ಪ್ರಬಂಧದ ಸಿದ್ಧತೆಗೆ ಸಲಹೆ ಮತ್ತು ಮಾರ್ಗದರ್ಶನ ನೀಡಿದ ಜಾನಪದ ವಿಭಾಗದ ಮುಖ್ಯಸ್ಥರಾದ ಡಾ. ಮಂಜುನಾಥ ಬೇವಿನಕಟ್ಟಿ ಅವರಿಗೆ ನಾನು ಕೃತಜ್ಞನಾಗಿರುತ್ತೇನೆ.
- ಅತ್ಯಂತ ಕಾಳಜಿ ವಹಿಸಿ ಎಂ.ಫಿಲ್. ಅಧ್ಯಯನದ ಪಠ್ಯಕ್ರಮವನ್ನು ಬೋಧಿಸಿದ ಜಾನಪದ ವಿಭಾಗದ ಅಧ್ಯಾಪಕ ವೃಂದದವರಾದ ಡಾ.ಸ.ಚಿ. ರಮೇಶ್, ಡಾ.ಹೆಚ್.ಕೆ. ನಾಗೇಶ್, ಸಿ.ಟಿ.ಗುರುಪ್ರಸಾದ್, ಹರಿಶ್ಚಂದ್ರ ಸಾಯಿಬಣ್ಣ ದಿಗ್‌ಸಂಗಿಕರ್ ಮತ್ತು ಬೋದಕೇತರ ಸಿಬ್ಬಂದಿಯವರಾದ ವೀರೇಶಪ್ಪ, ತಿಂದಪ್ಪ ಅವರಿಗೆ ನಾನು ಕೃತಜ್ಞನಾಗಿರುತ್ತೇನೆ.
- ಈ ಪ್ರಬಂಧದ ಸಿದ್ಧತೆಗೆ ಗ್ರಂಥಗಳನ್ನು ಒದಗಿಸಿದ ಗ್ರಂಥಾಲಯದ ಸಿಬ್ಬಂದಿಗೆ ನಾನು ಕೃತಜ್ಞನಾಗಿರುತ್ತೇನೆ.
- ಅಧ್ಯಯನದ ಬೆಳವಣಿಗೆಗೆ ಕಾರಣಕರ್ತರಾದ ತಂದೆ ದಿ. ಶ್ರೀ ಬ್ಯಾಟಿ ಹನುಮಂತಪ್ಪ, ತಾಯಿ ದಿ. ಶ್ರೀಮತಿ ಬ್ಯಾಟಿ ಭೀಮಕ್ಕ ಇವರಿಗೆ ನನ್ನ ನಮನಗಳನ್ನು ಸಲ್ಲಿಸುತ್ತೇನೆ.
- ಕ್ಷೇತ್ರಕಾರ್ಯದ ಸಮಯದಲ್ಲಿ ಮಾಹಿತಿ ನೀಡಿ ಸಹಕರಿಸಿದ ಕಡಲಬಾಳು ಗ್ರಾಮದ ಜನಪದ ವಕ್ತೃ ಬಂಧುಗಳಿಗೆ ನಾನು ಆಭಾರಿಯಾಗಿದ್ದೇನೆ.
- ಕ್ಷೇತ್ರಕಾರ್ಯದ ಸಮಯದಲ್ಲಿ ಸಹಕರಿಸಿ ಜನಪದ ಹಾಡುಗಳನ್ನು ಧ್ವನಿಮುದ್ರಣ ಮಾಡಿ, ಹಾಗೂ ಸುಂದರವಾದ ಛಾಯಚಿತ್ರಗಳನ್ನು ತೆಗೆದುಕೊಟ್ಟ ಸಂಶೋಧನಾ ವಿದ್ಯಾರ್ಥಿ ಮಿತ್ರರಾದ ಸೋಮೇಶ ಉಪ್ಪಾರ ಅವರಿಗೆ ನಾನು ಕೃತಜ್ಞನಾಗಿರುತ್ತೇನೆ.
- ಈ ಪ್ರಬಂಧದ ಸಿದ್ಧತೆ ಸಮಯದಲ್ಲಿ ಸಲಹೆ ಮತ್ತು ಸಹಕಾರ ನೀಡಿದ ಸಂಶೋಧನಾ ವಿದ್ಯಾರ್ಥಿ ಮಿತ್ರರಾದ ಸುಜಾತ ಲಕ್ಕಿ, ಚಾಜಿ ದೇವೇಂದ್ರಪ್ಪ, ಕೆ. ರಮೇಶ, ಮೋಹನ ಜಿ. ನಾಗವರ್ಮ, ಪುತ್ತಿ ವಸಂತಕುಮಾರ್, ಜಗದೀಶ ಅವರಿಗೆ ನಾನು ಕೃತಜ್ಞನಾಗಿರುತ್ತೇನೆ.
- ಈ ಪ್ರಬಂಧವನ್ನು ಸಕಾಲಕ್ಕೆ ಗಣಕಯಂತ್ರದ ಮೂಲಕ ಅಕ್ಷರಸಂಯೋಜನೆ ಮಾಡಿಕೊಟ್ಟ ಋತ್ವಿಕ್ ಕಂಪ್ಯೂಟರ್ಸ್ ಹೊಸಪೇಟೆಯ ರಿಚರ್ಡ್, ಅನಿತಾ ಡಿಸೋಜ ಹಾಗೂ ಬಸವರಾಜ ಅವರಿಗೆ ನಾನು ಕೃತಜ್ಞನಾಗಿರುತ್ತೇನೆ.

ಉಮಾಪತಿ ಬಿ.



**ಶ್ರೀ ಕಡಲಬಾಳಪ್ಪ**

ಪುರಾ ಸಮುದ್ರೇ ವಾಸಿನಂ ದೇವಂ ಭಕ್ತಾಭಿಷ್ಟ ಫಲಪ್ರದಂ
ಪ್ರಸನ್ನವದನಂ ವಂದೇ ಕಡಲಪುರ ಮಾರುತಿಂ

# ಪರಿವಿಡಿ

ಅಧ್ಯಾಯ ೧

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಜಾನಪದ ಅಧ್ಯಯನವು ಮೊದಲು ಸಂಗ್ರಹರೂಪದಲ್ಲಿ ಮಾತ್ರ ತನ್ನ ವ್ಯಾಪ್ತಿಯನ್ನು ಹೊಂದಿತ್ತು. ಆದರೆ ಇತ್ತೀಚಿನ ದಿನಗಳಲ್ಲಿ ವೈಜ್ಞಾನಿಕವಾಗಿ, ಶಾಸ್ತ್ರೀಯ ಶಿಸ್ತುಬದ್ಧ ಕ್ರಮದಿಂದಾಗಿ ಗ್ರಾಮ, ಜಾತ್ರೆ, ಜನಾಂಗ, ಹಬ್ಬ, ಬುಡಕಟ್ಟು ಸಂಪ್ರದಾಯಗಳ ಅಧ್ಯಯನಗಳು ನಡೆಯುತ್ತಿವೆ.

ಗ್ರಾಮೀಣ ಪ್ರದೇಶಗಳಲ್ಲಿ ಕಂಡುಬರುವ ಆಕರಗಳನ್ನು ಸಾಂಸ್ಕೃತಿಕ ಚರಿತ್ರೆಯ ಹಿನ್ನಲೆಯಲ್ಲಿ ಪುನರ್‍ರಚಿಸುವುದು ಇಂದು ಅನಿವಾರ್ಯವಾಗಿದೆ. ಇಂದು ಜಗತ್ತಿನ ಎಲ್ಲಾ ವಿಧಿ ವಿಧಾನಗಳು ಆಧುನೀಕರಣದ ಪ್ರಭಾವಕ್ಕೊಳಗಾಗಿ ವಿವಿಧ ರೀತಿಯ ಪ್ರಕ್ರಿಯೆಗಳಿಂದ ಹಾಗೂ ವಿಜ್ಞಾನದ ಹೊಸಹೊಸ ಆವಿಷ್ಕಾರಗಳಿಂದ ತನ್ನದೇ ಆದ ಬದಲಾವಣೆಗೊಳಗಾಗಿ ಹೊಸರೂಪ ಪಡೆಯುತ್ತಿವೆ. ಪ್ರತಿಯೊಂದು ಸಮುದಾಯವು ತನ್ನ ಸ್ವಂತಿಕೆಯನ್ನು ಮರುರೂಪಿಸಲು ಪರಂಪರಾನುಗತವಾಗಿ ಬಂದಂಥಹ ಕೆಲವು ಸಾಂಸ್ಕೃತಿಕ ಮಹತ್ವಗಳ ಬಗ್ಗೆ ಅಧ್ಯಯನ ಮಾಡಬೇಕಾಗುದುದು ಅತ್ಯವಶ್ಯಕವಾಗಿದೆ.

ಗ್ರಾಮದ ದೈವಗಳಿಗೆ ಸಂಬಂಧಿಸಿದ ಹಾಗೂ ಅಲ್ಲಿನ ಜನಪದರಲ್ಲಿ ಬಹಳ ಹಿಂದಿನಿಂದ ನಡೆದು ಕೊಂಡುಬಂದ ಆಚರಣೆಗಳು ತುಂಬ ಮಹತ್ವ ಪಡೆದುಕೊಂಡಿರುತ್ತವೆ. ಇಂದಿನ ಗ್ರಾಮಗಳು ಆಧುನಿಕ ನಾಗರಿಕತೆಯ ಪ್ರಭಾವಕ್ಕೊಳಗಾಗಿ ಸಂಸ್ಕೃತಿಯಲ್ಲಿ ಬದಲಾವಣೆಗಳಾಗುತ್ತಿವೆ. ಇಂಥಹ ಸಂಕ್ರಮಣಾವಸ್ಥೆಯ ಸಂದರ್ಭದಲ್ಲಿ ಮೂಲೆಗುಂಪಾಗುತ್ತಿರುವ ಗ್ರಾಮ ಪರಿಸರದ ಹಾಗೂ ಆಯಾ ದೈವಗಳಿಗೆ ಸಂಬಂಧಿಸಿದ ಆಚರಣೆಗಳ ಕುರಿತಾಗಿ ಅಧ್ಯಯನ ಮಾಡುವ ಕೆಲಸ ತುಂಬ ಮಹತ್ವ ಪೂರ್ಣವಾದುದಾಗಿದೆ.

ಇಂದು ಜಾನಪದ ಅಂಶಗಳ ಮೂಲಕ ಸಾಂಸ್ಕೃತಿಕವಾಗಿ ಸಂಶೋಧನೆ ಮಾಡಬೇಕಾದ ಕೆಲಸ ಬಹಳ ಇದೆ. ಗ್ರಾಮದ ದೈವಗಳ ಪರಿಚಯ, ಅಲ್ಲಿನ ಪರಿಸರದೊಂದಿಗೆ ಇರುವ ಮನುಷ್ಯ ಸಂಬಂಧ ಹಾಗೂ ಸಾಂಸ್ಕೃತಿಕವಾಗಿ ಬದಲಾಗುತ್ತಿರುವ ಅನೇಕ ಅಂಶಗಳನ್ನು ಅಧ್ಯಯನದ ಮೂಲಕ ಬೆಳಕಿಗೆ ತರುವುದು ಇಂದು ಅಗತ್ಯವಾಗಿದೆ. ಇದುವರೆಗೆ ಗ್ರಾಮೀಣ ದೈವಗಳ ಆಚರಣೆ, ನಂಬಿಕೆ, ಹರಕೆ, ಐತಿಹ್ಯ, ಕಥೆ ಹಾಡುಗಳನ್ನು ಕೇಂದ್ರವಾಗಿಟ್ಟುಕೊಂಡು ಅಧ್ಯಯನ ನಡೆಸಿರುವ ಪ್ರಯತ್ನಗಳು ಕಡಿಮೆ ಎಂದು ಹೇಳಬಹುದು. ಆ ಪ್ರಯತ್ನವನ್ನು ಪ್ರಸ್ತುತ ಪ್ರಬಂಧದಲ್ಲಿ ಕೈಗೊಳ್ಳಲಾಗಿದೆ.

"ಊರು ಸುಟ್ಟರೂ ಹನುಮಪ್ಪ ಊರ ಹೊರಗೆ" ಎನ್ನುವ ಗಾದೆ ಮಾತಿನಂತೆ ಊರು ಇದ್ದ ಕಡೆ ಹನುಮಂತ ದೇವರಗುಡಿ ಇದ್ದೇ ಇರುತ್ತದೆ. ಈತನ ಗುಡಿ ಇಲ್ಲದ ಹಳ್ಳಿಯೇ ಇಲ್ಲ ಎನ್ನಬಹುದು.

ಉತ್ತರ ಕರ್ನಾಟಕದಲ್ಲಿ ಹನುಮಪ್ಪನಿಗೆ ವಿಶಿಷ್ಟವಾದ ಮಹತ್ವವಿದೆ. ಈ ಭಾಗವು ಕಿಷ್ಕಿಂದೆಯ ಪ್ರದೇಶವಾದ್ದರಿಂದ ಇಲ್ಲಿ ಹನುಮಂತ ದೇವರಿಗೆ ವಿಶಿಷ್ಟವಾದ ಸ್ಥಾನವಿದೆ. ಆತ ಇಲ್ಲಿನ ಜನಪ್ರಿಯವಾದ ದೇವರುಗಳಲ್ಲಿ ಒಬ್ಬ. ಜಾತಿ ಜನಾಂಗಗಳ ಭೇದವಿಲ್ಲದೆ ಎಲ್ಲರಿಗೂ ಬೇಕಾದ ದೇವರು ಆಗಿದ್ದಾನೆ.

ಇಂತಹ ಜನಪ್ರಿಯತೆಯನ್ನು ಹೊಂದಿರುವ ಆಂಜನೇಯನ ದೇವಸ್ಥಾನ ಕಡಲಬಾಳು ಗ್ರಾಮದಲ್ಲಿ ಭವ್ಯವಾಗಿ ತಲೆಎತ್ತಿ ನಿಂತಿದೆ. ಇಲ್ಲಿ ಆಂಜನೇಯ ನೆಲೆಗೊಳ್ಳಲು ತನ್ನದೇ ಆದ ಐತಿಹ್ಯವನ್ನು ಪಡೆದುಕೊಂಡಿದ್ದಾನೆ. ಈತ ಕಡಲಿನಲ್ಲಿ ಬಾಳಿದವನಾದ್ದರಿಂದ (ಮೂರ್ತಿ ಹಳ್ಳದ ಮಡುವಿನಲ್ಲಿ ದೊರೆತಿದೆ ಎನ್ನುವ ಐತಿಹ್ಯವಿದೆ) ಕಡಲಬಾಳಪ್ಪ ಎನ್ನುವ ಹೆಸರು ಜನಜನಿತವಾಗಿದೆ. ಈತನ ಭಕ್ತರು ಇಂದಿಗೂ ದೂರದ ಸುಮಾರು ೪೮ ಊರುಗಳಲ್ಲಿ ಇದ್ದಾರೆ. ಮುಖ್ಯವಾಗಿ ನಾಯಕ (ವಾಲ್ಮೀಕಿ) ಮತ್ತು ಕುರುಬ ಜನಾಂಗದ ದೂರ ಗ್ರಾಮದ ಎಷ್ಟೋ ಕುಟುಂಬಗಳಿಗೆ ಈ ಕಡಲಬಾಳಪ್ಪನೇ ಮನೆದೇವರು. ತಮ್ಮ ಮಕ್ಕಳಿಗೆ ಕಡಲಬಾಳಪ್ಪನೆಂಬ ಹೆಸರಿಡುವ ರೂಢಿಯು ಇಂದಿಗೂ ಇದೆ. ಸುತ್ತ ಮುತ್ತಲಿನ ಅನೇಕ ಗ್ರಾಮದ ದೇವತೆಗಳಿಗೆಲ್ಲ ಈ ಕಡಲಬಾಳಪ್ಪನೇ ನಾಯಕನ ಸ್ಥಾನದಲ್ಲಿದ್ದಾನೆ.

ಆಂಜನೇಯನಿಗೆ ಸಂಬಂಧಿಸಿದ ಜೀವನಾವರ್ತನ ಮತ್ತು ವಾರ್ಷಿಕಾವರ್ತನ ಆಚರಣೆಗಳು ಇಂದಿಗೂ ನಡೆಯುತ್ತಿವೆ. ಅವುಗಳಲ್ಲಿ ಜಾತ್ರೆಯ ಸಂದರ್ಭದಲ್ಲಿ ಜರುಗುವ ಮುಳ್ಳು ಪವಾಡಕ್ಕೆ ವಿಶಿಷ್ಟವಾದ ಸ್ಥಾನವಿದೆ. ಈ ಪವಾಡವನ್ನು ವೀಕ್ಷಿಸಲು ಅಪಾರ ಭಕ್ತ ಸಮೂಹವೇ ಬರುತ್ತದೆ. ಮುಳ್ಳು ಪವಾಡ ನಡೆಯುವುದು ಚೈತ್ರ ಮಾಸದಲ್ಲಿ. ಚಂದ್ರಮಾನ ಯುಗಾದಿಯ ನಂತರ ಐದನೆ ದಿನದಲ್ಲಿ.

ಪ್ರಸ್ತುತ ಸಂದರ್ಭದಲ್ಲಿ ಇಂತಹ ವೈಶಿಷ್ಟ್ಯತೆಯನ್ನು ಹೊಂದಿ ಅಪಾರ ಭಕ್ತ ಸಮೂಹವನ್ನು ಹೊಂದಿರುವ ಕಡಲಬಾಳು ಆಂಜನೇಯಸ್ವಾಮಿಯ ವಿವರವಾದ ಮಾಹಿತಿಯನ್ನು ಸಂಗ್ರಹಿಸುವುದು ಈ ಅಧ್ಯಯನದ ಉದ್ದೇಶವಾಗಿದೆ.

ಯಾವುದೇ ಅಧ್ಯಯನ ಕೈಗೊಂಡರೂ ಅದಕ್ಕೆ ಒಂದು ನಿರ್ದಿಷ್ಟವಾದ ಚೌಕಟ್ಟು ಇರುತ್ತದೆ. ಅದರಂತೆಯೇ ಕಡಲಬಾಳು ಆಂಜನೇಯ ಸ್ವಾಮಿಯ ಕುರಿತು ಅಧ್ಯಯನ ಮಾಡುವಾಗ ಕೆಲವು ಪ್ರಮುಖ ಭಾಗಗಳನ್ನು ಮಾಡಿಕೊಳ್ಳಲಾಗಿದೆ. ಅವುಗಳಲ್ಲಿ ಕಡಲಬಾಳು ಗ್ರಾಮ, ಆಂಜನೇಯಸ್ವಾಮಿ, ಆಚರಣೆಗಳು, ಆಂಜನೇಯಸ್ವಾಮಿ ಮತ್ತು ಇತರ ದೈವದ ಸಂಬಂಧ, ಆಂಜನೇಯಸ್ವಾಮಿ ಕುರಿತ ನಂಬಿಕೆ ಮತ್ತು ಹರಕೆಗಳು, ಆಂಜನೇಯಸ್ವಾಮಿ ಕುರಿತು ಸಾಹಿತ್ಯ ಇವುಗಳ ವಿವರವಾದ ಮಾಹಿತಿ ಸಂಗ್ರಹಿಸುವ ಪ್ರಯತ್ನವನ್ನು ಈ ಪ್ರಬಂಧದಲ್ಲಿ ಕೈಗೊಳ್ಳಲಾಗಿದೆ.

ಈ ಅಧ್ಯಯನದ ವಿವರವಾದ ಮಾಹಿತಿಯನ್ನು ಕ್ಷೇತ್ರಕಾರ್ಯದ ಮುಖಾಂತರ ಸಂಗ್ರಹಿಸಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಕ್ಷೇತ್ರಕಾರ್ಯ ವಿಧಾನವನ್ನು ಪ್ರಶ್ನಾವಳಿ, ವೀಕ್ಷಣೆ ಮತ್ತು ಸಂದರ್ಶನದ ಮುಖಾಂತರ ಕೈಗೊಳ್ಳಲಾಗಿದೆ. ಅಧ್ಯಯನಕ್ಕೆ ಪೂರಕವಾಗಿ ಅನೇಕ ಗ್ರಂಥಗಳ ಬಳಕೆಯನ್ನು ಮಾಡಿಕೊಂಡು ಪ್ರಬಂಧವನ್ನು ಸಿದ್ಧಪಡಿಸಲಾಗಿದೆ.



ಅಧ್ಯಾಯ ಎರಡು

# ಕಡಲಬಾಳು ಗ್ರಾಮ

೨.೧ : ಪದನಿಷ್ಪತ್ತಿ

೨.೨ : ಜಾತಿ

೨.೩ : ವೃತ್ತಿ

೨.೪ : ಭೌಗೋಳಿಕತೆ

೨.೫ : ಚಾರಿತ್ರಿಕತೆ

# ಅಧ್ಯಾಯ ೨

# ಕಡಲಬಾಳು ಗ್ರಾಮ

ಕಡಲಬಾಳು ಎಂಬ ಹೆಸರು ಕೇಳಿದ ಕೂಡಲೇ ಅನೇಕರಿಗೆ ಹಳೇ ಮೈಸೂರು ಪ್ರಾಂತದ ದಾವಣಗೆರೆ ಹತ್ತಿರವಿರುವ ಕಡಲಬಾಳು ಎಂಬ ಗ್ರಾಮವು ನೆನಪಾಗುವುದು ಸಹಜ. ಆದರೆ ಈ ಗ್ರಾಮವು ಮಂತ್ರಾಲಯ ರಾಯರ ಅನೇಕ ಕ್ಷೇತ್ರಗಳಲ್ಲಿ ಒಂದು ಮತ್ತು ಕೊಪ್ಪಳ ಗವಿಮಠದ ಶಾಖಾಮಠಗಳಲ್ಲಿ ಒಂದಾಗಿದೆ. ಈ ಗ್ರಾಮವು ಬಳ್ಳಾರಿ ಜಿಲ್ಲೆಯ ಹಗರಿಬೊಮ್ಮನಹಳ್ಳಿ ತಾಲೂಕಿನ ಹೊಸಪೇಟೆ ಹರಿಹರ ಮಾರ್ಗದ ರಾಜ್ಯ ಹೆದ್ದಾರಿಯಿಂದ ಉತ್ತರಕ್ಕೆ ನಾಲ್ಕು ಕಿಲೋಮೀಟರ್ ದೂರದಲ್ಲಿದೆ. ಈ ಊರು ಆಂಜನೇಯಸ್ವಾಮಿಯ ದೇವಸ್ಥಾನ ಮತ್ತು ಜಾತ್ರೆಯಿಂದ ಸುತ್ತಮುತ್ತಲೂ ಪ್ರಸಿದ್ಧಿಯನ್ನು ಪಡೆದಿದೆ.

೨.೧. ಪದನಿಷ್ಪತ್ತಿ : ಪ್ರತಿಯೊಂದು ಗ್ರಾಮ ನಾಮಕ್ಕೂ ಐತಿಹಾಸಿಕ ಪರಂಪರೆಯಿರುತ್ತದೆ. ಅದಕ್ಕೆ ಪೂರಕ ಸಾಮಗ್ರಿಯಾಗಿ ಶಾಸನ, ಸಾಹಿತ್ಯ ಕೃತಿಗಳು ಸಾಕ್ಷಿ ನುಡಿಯುತ್ತಿರುತ್ತವೆ. ಅಂತಹ ಪ್ರಮಾಣಪೂರ್ವ ದಾಖಲೆಗಳು ಯಾವುವು ಇಲ್ಲವಾದ್ದರಿಂದ ಗ್ರಾಮನಾಮ ಇತಿಹಾಸಕ್ಕೆ ಭಾಷಿಕ ಮತ್ತು ಜಾನಪದೀಯ ಅಂಶಗಳೇ ಪ್ರಮುಖ ಆಧಾರ.[೧]

ಈ ಊರಿಗೆ ಕಡಲಬಾಳು ಎಂಬ ಹೆಸರು ಬರಲು ಕಾರಣ ಇಲ್ಲಿ ಪ್ರಸಿದ್ಧವಾದ ಆಂಜನೇಯನ ದೇವಸ್ಥಾನವಿದೆ. ಈ ಆಂಜನೇಯ ಕಡಲಿನಲ್ಲಿ ಬಾಳಿದವನಾದ್ದರಿಂದ (ಮೂರ್ತಿ ಹಳ್ಳದ ಮಡುವಿನಲ್ಲಿ ದೊರೆತಿದೆ ಎನ್ನುವ ಐತಿಹ್ಯವಿದೆ) ಈತನಿಗೆ 'ಕಡಲಬಾಳಪ್ಪ' ಎನ್ನುವ ಹೆಸರು ಜನಜನಿತವಾಗಿದೆ. ಈ ಮಾರುತಿಯ ವಿಗ್ರಹವನ್ನು ಊರಲ್ಲಿ ಸ್ಥಾಪಿಸಿದ ಮೇಲೆ ಈ ಊರಿಗೆ 'ಕಡಲಬಾಳು' ಎಂಬ ಹೆಸರು ರೂಢಿಯಲ್ಲಿ ಬಂದಿತು. ಈತನ ಭಕ್ತರು ತಮ್ಮ ಮಕ್ಕಳಿಗೆ ಕಡಲಬಾಳಪ್ಪನೆಂಬ ಹೆಸರಿಡುವ ರೂಢಿಯು ಇಂದಿಗೂ ನಡೆದಿದೆ. ಆಶ್ರಿತರನ್ನು ಪರಿಪಾಲಿಸಲೋಸುಗ ಆಂಜನೇಯಸ್ವಾಮಿಯು 'ಶ್ರೀ ಕಡಲಬಾಳಪ್ಪ'ನೆಂಬ ಹೆಸರಿನಿಂದ ಬಂದು ನೆಲೆಸಿರುವ ಸದ್ಭಕ್ತ ಚಿಂತಾಮಣಿಯ ಪುಣ್ಯಕ್ಷೇತ್ರ ಈ 'ಕಡಲಬಾಳು'.

'ಕಡಿಲ್' ಎಂದರೆ ಢಾಲು. 'ಬಾಳ್' ಎಂದರೆ ಖಡ್ಗವು. ಇವುಗಳನ್ನು ತಯಾರಿಸುವ ಬೈಲುಕಮ್ಮಾರ ಕೊಲಿಮೆಗಳಿದ್ದ ಕಾರ್ಖಾನೆಯಾಗಿದ್ದಿತೆಂದು ಹೇಳುತ್ತಾರೆ. ಹೀಗೆ ಕಡಿಲ್ ಬಾಳ್ ಎಂಬುದು ಜನಜನಿತವಾಗಿ 'ಕಡಲಬಾಳು' ಆಗಿದೆ. ಅಲ್ಲದೆ ಈ ಊರಿಗೆ 'ಶರಧಿಪುರ', 'ಕಡಲಪುರ' ಎಂಬ ಹೆಸರುಗಳ ಉಲ್ಲೇಖ ಸಹ ಇದೆ.

ಪದನಿಷ್ಪತ್ತಿಗೆ ಸಂಬಂಧಿಸಿದ ಇನ್ನೊಂದು ವಿಚಾರ ಹೀಗಿದೆ. ಇತ್ತೀಚಿಗೆ ಪಂಡಿತರೊಬ್ಬರು ಈ ಗ್ರಾಮಕ್ಕೆ ಹಿಂದೆ 'ಲಕ್ಷ್ಮೀಪುರ'ವೆಂಬ ಹೆಸರಿತ್ತು. ಅದೇ ಹೆಸರನ್ನು ಶುದ್ಧ ಕರ್ನಾಟಕ ರಾಜರು ಮತ್ತು ಪಾಳೇಗಾರರು ಇದೇ ಅರ್ಥವನ್ನು ಹೇಳುವ 'ಕಡಲಬಾಲೆ' ಅಥವಾ 'ಕಡಲಬಾಳು' ಎಂದು ಕರೆದು ಅರ್ಥ ಹಚ್ಚಲು ಪ್ರಯತ್ನಿಸಿದ್ದಾರೆ.

ಸ್ಥಳನಾಮ ಅಧ್ಯಯನ ವಿಧಾನದ ಹಿನ್ನಲೆಯಲ್ಲಿ ಭಾಷಿಕವಾಗಿ ಆಲೋಚಿಸಿದಾಗ ಒಂದು ಸ್ಥಳನಾಮ ಎರಡು ಪದಗಳಿಂದ ಕೂಡಿರುತ್ತದೆ. 'ಕಡಲಬಾಳು' ಎಂಬ ಪದದಲ್ಲಿ ಎರಡು ಶಬ್ದಗಳಿವೆ. ಕಡಲಬಾಳು ಪಂಡಿತರ ಅರ್ಥಕ್ಕೆ 'ಲಕ್ಷ್ಮೀಪುರ' ಎಂಬುದು ಕಡಲಬಾಲೆ ಎಂದಾಗಿದೆ. ಕಡಲಬಾಲೆ ಎಂದರೆ ಬರೀ ಲಕ್ಷ್ಮೀ ಎಂದಿಷ್ಟೇ ಆಗುತ್ತದೆ. ಅದರ ಮುಂದೆ ಮತ್ತೆ ಪುರ ಎಂದು ಸೇರಿಸಬೇಕಾಗುತ್ತದೆ. ಆದರೆ ಇಲ್ಲಿ ಹಾಗೆ ಆಗಿಲ್ಲ. ಇದಲ್ಲದೆ ಐತಿಹಾಸಿಕವಾಗಿ 'ಬಾಳು' ಎಂಬ ಶಬ್ದ ಗ್ರಾಮ, ಊರು, ವಸತಿ ಈ ಅರ್ಥದಲ್ಲಿ ಅನೇಕ ಊರುಗಳ ಹೆಸರುಗಳ ಅಂತ್ಯದಲ್ಲಿ ಇರುವುದು ಕಂಡುಬಂದಿದೆ. ಉದಾಹರಣಾರ್ಥ ಗೊಂಡಬಾಳು, ಗೋರಬಾಳು, ತರಳಬಾಳು ಮುಂತಾಗಿ 'ಬಾಳು' ಎಂಬುದು ಗ್ರಾಮ ಅಥವಾ ಪುರ ಎಂಬ ಅರ್ಥದಲ್ಲಿಯೇ ಈ ಊರಿನ ಹೆಸರಿನಲ್ಲಿ ಉಪಯೋಗಿಸಲಾಗಿದೆ. ಹೀಗೆ ಲಕ್ಷ್ಮೀಪುರ -ಕಡಲಬಾಲೆ-ಕಡಲಬಾಳು ಎಂದಾಗಿದೆ.[೨]

ಕಡಲಬಾಳು ಎಂಬ ಸ್ಥಳನಾಮವು ಮೇಲಿನ ಐತಿಹ್ಯವನ್ನು ಹೊಂದಿದೆ. ಇದರ ನಿಜ ನಿಷ್ಪತ್ತಿ ಹೀಗಿದೆ.

ಕಡಲ-ಜಲವಾಚಿ

ಬಾಳು>ಹಾಳು>ಪಾಳ್

ಎಂಬ ರೂಪದಿಂದ ನಿಷ್ಪತ್ತಿಯಾಗಿದೆ. ಇದೊಂದು ಜಲವಾಚಿ ಗ್ರಾಮನಾಮ 'ಬಾಳ್' ಎಂಬ ವಾರ್ಗಿಕವು ಪ್ರಾಚೀನ ನೆಲೆಯನ್ನು ಹೇಳುತ್ತಿದ್ದು, ಇದು ಪಾಳ್>ಹಾಳ್‌ನಿಂದ ರೂಪಾಂತರ ಹೊಂದಿದೆ. ಭೌಗೋಳಿಕವಾಗಿ ಈ ಊರಿನ ಸ್ವಲ್ಪ ಅಂತರದಲ್ಲಿ ನದಿಯು ಹರಿಯುತ್ತಿದೆ. ಈ ಕಾರಣದಿಂದ ಇದು ಜಲವಾಚಿ ಸ್ಥಳನಾಮವೆಂದು ನಾಮವಿಜ್ಞಾನದ ಹಿನ್ನಲೆಯಲ್ಲಿ ನಿಜನಿಷ್ಪತ್ತಿ ಹೇಳಬಹುದು.

೨.೨ ಜಾತಿ : ಜಾನಪದ ಕೇವಲ ವೃತ್ತಿ ಅಥವಾ ಭೌಗೋಳಿಕ ಪರಿಸ್ಥಿತಿಯನ್ನನುಸರಿಸಿಯಷ್ಟೇ ಬೆಳೆಯುವುದಿಲ್ಲ ಮತ್ತು ವೈವಿಧ್ಯಗೊಳ್ಳುವುದಿಲ್ಲ. ಅದರ ನಡುವೆ ಜಾತಿಯ ಸಂಬಂಧವೂ ಮುಖ್ಯವಾಗಿರುತ್ತದೆ. ಕಾರಣ ಇವೆಲ್ಲಾ ಪರಿಸ್ಪರ ಅಂತರ್‌ಸಂಬಂಧಿಗಳು. ಭಾರತೀಯ ಸಂದರ್ಭದಲ್ಲಂತೂ ಜಾತಿ ಬಲಿಷ್ಟವಾದ ಒಂದು ಸಾಮಾಜಿಕ ಗುಣವಾಗಿದ್ದು ಸಾಂಸ್ಕೃತಿಕವಾಗಿ ಹಲವು ಅಂಶಗಳನ್ನು ನಿಯಂತ್ರಿಸುವ, ನಿರ್ಮಿಸುವ ವಿಶೇಷವಾಗಿದೆ. ಇಷ್ಟಲ್ಲದೆ, ಜಾತಿಯ ಬಗೆಗೆ ಆಯಾ ಜಾತಿಗಳಲ್ಲಿರುವ ನಂಬಿಕೆ, ಐತಿಹ್ಯ, ಪುರಾಣಗಳೂ ಜಾನಪದ ಅಧ್ಯಯನದ ಮುಖ್ಯ ಅಂಗವೇ ಆಗಿರುತ್ತವೆ.[೪]

ಈ ಗ್ರಾಮದಲ್ಲಿ ಹಲವಾರು ಜಾತಿವರ್ಗಗಳ ಜನರೂ ಇದ್ದಾರೆ. ಓಂದೆ ಬ್ರಾಹ್ಮಣರ ೨೦ರಿಂದ ೩೦ ಮನೆಗಳಿದ್ದು ಕಾರಣಾಂತರಗಳಿಂದ ಕ್ರಮೇಣ ಈ ಊರು ಬಿಟ್ಟು ಹೋಗಿದ್ದಾರೆ. ಸಧ್ಯಕ್ಕೆ ಇಲ್ಲಿ ಬ್ರಾಹ್ಮಣರ ವಸತಿ ಇಲ್ಲ. ಈ ಗ್ರಾಮದಲ್ಲಿ ಪ್ರಧಾನವಾಗಿರುವ ಜಾತಿಗಳೆಂದರೆ ನಾಯಕರು, ವೀರಶೈವರು, ಮುಸ್ಲಿಂರು, ಹರಿಜನರು, ಚಲವಾದಿಯವರು, ಗೌಣವಾಗಿರುವ ಜಾತಿಗಳೆಂದರೆ ಕುರುಬರು, ಪದ್ಮಶಾಲಿ (ನೇಕಾರರು), ಮಡಿವಾಳರು, ವಿಶ್ವಕರ್ಮ, ಬೆಸ್ತರು, ಬಾರಿಕರು, ಹಡಪದವರು, ಸಿಂಪಿಗರು ಮುಂತಾದವರು.

ಊರಿನಲ್ಲಿ ಎಲ್ಲಾ ಜಾತಿಗೆ ಸೇರಿದವರಿದ್ದರೂ ಮದುವೆ, ಶವಸಂಸ್ಕಾರ, ಊರುದೇವರ ಕಾರ್ಯ, ಮುಂತಾದ ಸಂದರ್ಭದಲ್ಲಿ ಎಲ್ಲರೂ ಭಾಗವಹಿಸುತ್ತಿದ್ದು, ಸಾರ್ವಜನಿಕವಾಗಿ ಒಗ್ಗಟ್ಟು ಹಾಗೂ ಮಾನವೀಯ ಸಂಬಂಧಗಳನ್ನು ನಮ್ಮ ಜನಪದರು ಇನ್ನೂ ಮುಂದುವರಿಸಿಕೊಂಡು ಬಂದಿರುವುದಕ್ಕೆ ಆಂಜನೇಯ ದೈವದ ಆಚರಣೆಗಳೇ ಜ್ವಲಂತ ನಿದರ್ಶನ. ಯಾವ ಜಾತಿ, ಮತ, ಪಂಥವೆಂಬ ಭೇದವಿಲ್ಲದೆ ಸಾಮೂಹಿಕವಾಗಿ ಎಲ್ಲಾ ಸಂದರ್ಭಗಳಲ್ಲೂ ಇಲ್ಲಿಯ ಜನ ಸಹಭಾಗಿತ್ವದ ಮನೋಭಾವ ತಳೆದಿದ್ದಾರೆ.

೨.೩. ವೃತ್ತಿ : ಒಕ್ಕಲುತನವೇ ಎಲ್ಲಾ ಗ್ರಾಮಸ್ಥರ ಮೂಲ ವೃತ್ತಿ. ೧೯೭೧ರಲ್ಲಿ ಮಾಲವಿ ಆಣೆಕಟ್ಟು ನಿರ್ಮಾಣವಾದ ಮೇಲೆ (ಹಗರಿಬೊಮ್ಮನಹಳ್ಳಿ ಜಲಾಶಯ) ಈ ಕಡಲಬಾಳು ಗ್ರಾಮದ ಸುಮಾರು ಸಾವಿರ ಎಕರೆ ಮೇಲ್ಪಟ್ಟು ಈ ಜಲಾಶಯದ ಆಯಕಟ್ಟಿಗೆ ಸೇರಿದೆ. ಆದರೆ ಈ ಜಲಾಶಯದಲ್ಲಿಯೇ ಸಾಕಷ್ಟು ನೀರು ಶೇಖರವಾಗದಿರುವುದರಿಂದಲೂ, ಮಳೆಗಾಲ ಕಡಿಮೆಯಾಗುತ್ತಾ ಬಂದಿರುವುದರಿಂದಲೂ ಈ ಆಣೆಕಟ್ಟಿನಿಂದ ಈ ಗ್ರಾಮಕ್ಕೆ ವಿಶೇಷವಾಗಿ ಯಾವ ಪ್ರಯೋಜನವೂ ಆಗಿಲ್ಲ. ನಂತರ ಹೊಲಗಳಲ್ಲಿ ಬಾವಿಗಳನ್ನು ತೋಡಿಕೊಂಡು ಅದರಿಂದ ನೀರು ಹರಿಸಿ ತೋಟಗಳನ್ನು ಕೂಡಾ ಮಾಡಿಕೊಂಡಿದ್ದರು. ಇದರಿಂದಾಗಿ ಓಂದಿನ ಕಾಲಕ್ಕೆ ಊರುಸಂಪದ್ಭರಿತವಾಗಿತ್ತು. ಈಗ ವಿದ್ಯುತ್ ಸೌಕರ್ಯದಿಂದ ಬೋರ್‌ವೆಲ್‌ಗಳಿಗೆ ಪಂಪ್‌ಸೆಟ್ಟುಗಳನ್ನು ಇಟ್ಟುಕೊಂಡು ಬೆಳೆಗಳನ್ನು ಬೆಳೆಯಲಾಗುತ್ತಿದೆ. ಇಂತಹ ಪಂಪುಸೆಟ್ಟುಗಳ ಸಂಖ್ಯೆ ಬಹಳ ಇವೆ. ಆದರೆ ಪ್ರಸ್ತುತ ದಿನಗಳಲ್ಲಿ ಮಳೆಗಾಲ ಕಡಿಮೆಯಾಗಿ ಬೋರ್‌ವೆಲ್‌ನಲ್ಲಿ ನೀರು ಸಹ ಕಡಿಮೆಯಾಗಿ ದಿನಕ್ಕೆ ಆರುತಾಸು ವಿದ್ಯುತ್ ಸರಬರಾಜಿನಿಂದ ರೈತರಿಗೆ ದಿಕ್ಕು ತೋಚದಂತಾಗಿದೆ.

ಜೀವನೋಪಾಯಕ್ಕಾಗಿ ಕೆಲವು ಜನರು ಕೂಲಿಕೆಲಸ, ಸಣ್ಣ ಪುಟ್ಟ ವ್ಯಾಪಾರ, ಹಗರಿಬೊಮ್ಮನಹಳ್ಳಿಯ ವಿವಿಧ ಖಾಸಗಿ ಅಂಗಡಿಯಲ್ಲಿ ಗುಮಾಸ್ತಿ ಕೆಲಸ, ದುಡಿಯುವುದಕ್ಕೆ ಕೆಲವು ದಿನಗಳಲ್ಲಿ ಬೇರೆ ಬೇರೆ ಊರುಗಳಿಗೆ ವಲಸೆ ಹೋಗುವುದು ಸರ್ವೇಸಾಮಾನ್ಯವಾಗಿದೆ. ಮತ್ತು ಊರಲ್ಲಿ ವಿಶ್ವಕರ್ಮ ಜಾತಿಯವರು ಬಡಗಿತನವನ್ನು, ಮಡಿವಾಳರು ಬಟ್ಟೆ ತೊಳೆಯುವುದನ್ನು, ಕೆಲವು ಹರಿಜನರು ಚರ್ಮ ಹದಮಾಡುವುದನ್ನು, ಚಲವಾದಿಯವರು ಸನಾಯಿ ಊದುವುದನ್ನು ಇಂದಿಗೂ ತಮ್ಮ ಕಾಯಕವನ್ನಾಗಿ ಮಾಡಿಕೊಂಡಿದ್ದಾರೆ.

೨.೪. **ಭೌಗೋಳಿಕತೆ** : ಈ ಗ್ರಾಮವು ತುಂಗಾಭದ್ರೆಯ ಉಪನದಿಯಾದ ಚಿಕ್ಕಹಗರಿ ಎಂಬ ಹಳ್ಳದ ಬಲದಂಡೆಯ ಮೇಲಿದೆ. ಮತ್ತು ತುಂಗಾಭದ್ರ ನದಿಯ ಹಿನ್ನೀರಿನ ದಡದ ಹತ್ತಿರದಲ್ಲಿದೆ. ದಾವಣಗೆರೆ ಭಾಗದಲ್ಲಿ ಹುಟ್ಟಿಕೊಂಡ ಇಲ್ಲಿಯ ಹಗರಿನದಿ ಬಳ್ಳಾರಿ ಜಿಲ್ಲೆಯಲ್ಲಿ ತನ್ನ ಮುಕ್ಕಾಲು ಭಾಗ ಉದ್ದ ಸವೆಸಿ ಹಗರಿಬೊಮ್ಮನಹಳ್ಳಿ ಹತ್ತಿರ ಬಾಚಿಗೊಂಡನಹಳ್ಳಿ ಸಮೀಪ ತುಂಗಭದ್ರೆಯನ್ನು ಸೇರಿಕೊಳ್ಳುತ್ತದೆ.[೪] ಹಗರಿಬೊಮ್ಮನಹಳ್ಳಿ ಹಾಗೂ ಬಾಚಿಗೊಂಡನಹಳ್ಳಿ ಮಧ್ಯದಲ್ಲಿ ಕಡಲಬಾಳು ಗ್ರಾಮ ಇದೆ. ಕಡಲಬಾಳು ಮುಂದೆ ಹರಿಯುವ ಈ ಉಪನದಿಯು ಆರಂಭದಲ್ಲಿ ಉತ್ತರವಾಹಿನಿಯಾಗಿ ಕಡಲಬಾಳು ಗ್ರಾಮ ಮುಟ್ಟಿದ ಕೂಡಲೇ ಪಶ್ಚಿಮ ವಾಹಿನಿಯಾಗಿ ಈ ಊರನ್ನು ಸುತ್ತು ಬಳಸಿ ಮತ್ತೆ ಉತ್ತರ ವಾಹಿನಿಯಾಗಿ ಹರಿಯುವುದರಿಂದ ಈ ಗ್ರಾಮವು ಪುಣ್ಯ ಕ್ಷೇತ್ರವೆನಿಸಿದೆ. ಊರಿನಗೌಡರಾದ ಪಾಟೇಲ್ ಗುರುಬಸವನಗೌಡರು ನೀಡಿದ ಮಾಹಿತಿಯಂತೆ ೧೯೩೧ರಲ್ಲಿ ಜನಗಣತಿ ಪ್ರಕಾರ ೨೧೯ ಮನೆಗಳು ಮತ್ತು ೮೦೦ ಜನ ಸಂಖ್ಯೆ ಇತ್ತು. ೨೦೦೧ರ ಜನಗಣತಿ ಪ್ರಕಾರ ಈ ಗ್ರಾಮದಲ್ಲಿ ೬೦೦ ಮನೆಗಳಿವೆ. ೧೫೬೪ ಗಂಡು, ೧೫೧೩ ಹೆಣ್ಣು ಒಟ್ಟು ೩೦೭೭ ಜನಸಂಖ್ಯೆ ಇದೆ. ಈ ಊರಿನ ಗ್ರಾಮ ಪಂಚಾಯಿತಿಗೆ ಇನ್ನೂ ನಾಲ್ಕು ಉಪಗ್ರಾಮಗಳು ಸೇರುತ್ತವೆ. ಹಗರಿಬೊಮ್ಮನಹಳ್ಳಿಯಿಂದ ಕಡಲಬಾಳಿಗೆ ಹೋಗುವ ಮಾರ್ಗ ಮಧ್ಯದಲ್ಲಿ ಈ ಹಳ್ಳದ ಬಲದಂಡೆಯಲ್ಲಿ ಬ್ಯಾಲಾಳು ಗ್ರಾಮವಿದೆ. ಎಡದಂಡೆಯಲ್ಲಿ ಕಡಲಬಾಳು ಗ್ರಾಮಕ್ಕೆ ಹತ್ತಿರದಲ್ಲಿ ಕಾತ್ಯಾಯಿನಿ ಮರಡಿ ಮತ್ತು ಓಬಳಾಪುರ ಗ್ರಾಮಗಳಿವೆ. ಮತ್ತು ಊರಿನ ಪೂರ್ವಕ್ಕೆ ಹೊಸ ಆನಂದದೇವನಹಳ್ಳಿ ಗ್ರಾಮವಿದೆ. ಅಂದಿನ ಎಂ.ಎಲ್.ಸಿ.ಗಳಾದ ಕೆ.ಚೆನ್ನಬಸವನಗೌಡರ ಒತ್ತಾಯದ ಮೇರೆಗೆ ೧೯೬೪ರಲ್ಲಿ ಕರ್ನಾಟಕ ರಾಜ್ಯ ಸಾರಿಗೆ ನಿಗಮದವರಿಂದ ಬಸ್ಸು ಪ್ರಥಮವಾಗಿ ಕಡಲಬಾಳು ಮಾರ್ಗವಾಗಿ ಬಾಚಿಗೊಂಡನಹಳ್ಳಿಗೆ ಬಂದಿತು.[೫]

ಹಿಂದೆ ಎಂತಹ ಬೇಸಿಗೆಯಲ್ಲಿಯೂ ಇಲ್ಲಿ ಹರಿಯುವ ಉಪನದಿಯೂ ಬತ್ತುತ್ತಿದ್ದಿಲ್ಲ. ಒಂದು ಪಾದ ಮಳುಗುವಷ್ಟಾದರೂ ಸಣ್ಣಾಗಿ ಯಾವಾಗಲೂ ಹರಿಯುತ್ತಲೇ ಇತ್ತು. ಮಳೆಗಾಲದಲ್ಲಂತೂ ಒಮ್ಮೊಮ್ಮೆ ಮನುಷ್ಯನೆತ್ತರ ಉಕ್ಕಿ ಹರಿದು ಬಂದು ಹಳ್ಳದಲ್ಲಿ ಇರುವ ದನ, ಕರು, ಮನುಷ್ಯರನ್ನು ಕೂಡ ಕೊಚ್ಚಿಕೊಂಡು ಹೋಗುತ್ತಿತ್ತು. ಪ್ರವಾಹ ಸಂದರ್ಭದಲ್ಲಿ ನೀರು ಊರಲ್ಲಿಯೂ ಪ್ರವೇಶಿಸುತ್ತಿತ್ತು. ಪ್ರವಾಹದಲ್ಲಿ ಬಂಡಿಗಳು, ಹುಲ್ಲಿನ ಬಣವಿಗಳು ತೇಲಿಕೊಂಡು ಬಂದ ನಿದರ್ಶನಗಳಿವೆ. ಈಗ ಅದೆಲ್ಲ ಸುಳ್ಳು ಮಾತಾಗಿದೆ. ಮಳೆಗಾಲದಲ್ಲಿ ಕೂಡ ಈ ಉಪನದಿಯಲ್ಲಿ ಸ್ವಲ್ಪವೂ ನೀರು ಕಾಣದಿರುವ ಪ್ರಸಂಗ ಇದೆ. ಜನರಿಗೆ, ದನಕರುಗಳಿಗೆ ಆಸರೆಯಾಗಿದ್ದ ಈ ಉಪನದಿ ಇಂದು ಒಣಗಿ ಉಸುಕು, ಮಣ್ಣು ಮತ್ತು ತಗ್ಗುಗಳಿಂದ ಕೂಡಿದೆ. ಹಿಂದಿನ ಕಾಲದಲ್ಲಿ ಸದಾ ಹಸಿರಿನಿಂದ ಆವೃತವಾಗಿದ್ದ ಊರು ಇಂದು ಹಸಿರನ್ನು ಕಳೆದುಕೊಂಡು ಬರಡಾಗಿದೆ.

೨.೫. **ಚಾರಿತ್ರಿಕತೆ** : ಈಗ ೨೦೦ ವರ್ಷಗಳ ಹಿಂದಿನ ಕರ್ನಾಟಕದಲ್ಲಿಯ ರಾಜಕೀಯ ವ್ಯವಸ್ಥೆಯಲ್ಲಿ ಇದು ಪಾಳೆಗಾರರ ಆಡಳಿತಕ್ಕೆ ಸೇರಿತ್ತು. ಈ ಭಾಗವು ಹರಪನಹಳ್ಳಿ ನಾಯಕರ ವಶದಲ್ಲಿತ್ತು. ಆ ನಾಯಕರಲ್ಲಿ ಪ್ರಸಿದ್ಧನಾದ ಸೋಮಶೇಖರ ನಾಯಕ ನಾರಾಯಣ ದೇವರಕೆರೆಯನ್ನು

ತನ್ನ ಎರಡನೇ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದನು. ಈತನು ಕ್ರಿ.ಶ. ೧೭೬೬ರಲ್ಲಿ ಮರಣಹೊಂದಿದನು. ಆತನಿಗೆ ಮಕ್ಕಳಿರದ್ದರಿಂದ ಆತನ ಮಡದಿ ಸೋಮಮ್ಮಾಜಿಯು ಬಸಪ್ಪ ನಾಯಕನನ್ನು ದತ್ತು ತೆಗೆದುಕೊಂಡು ೧೭೭೯ರಲ್ಲಿ ಪಟ್ಟಕಟ್ಟಿದಳು. ಈ ನಾಯಕನು ಹರಪನಹಳ್ಳಿಗಿಂತ ನಾರಾಯಣ ದೇವರಕೆರೆಯಲ್ಲಿಯೇ ಹೆಚ್ಚು ವಾಸವಾಗಿರುತ್ತಿದ್ದನು. ಈ ನಾಯಕನು ತನ್ನ ಕೈಯಲ್ಲಿರುವ ಪ್ರದೇಶದ ಆಡಳಿತವು ಸುಭದ್ರವಾಗಿರುವುದಕ್ಕಾಗಿ ಮತ್ತು ತಮ್ಮ ರಾಜ್ಯರಕ್ಷಣೆಗಾಗಿ ಅಲ್ಲಲ್ಲಿ ಆಯಕಟ್ಟಿನ ಪ್ರದೇಶದಲ್ಲಿ ತನ್ನ ಕೈ ಕೆಳಗೆ ವಿಶ್ವಾಸಕ್ಕೆ ಪಾತ್ರರಾದಂತಹ ಆಪ್ತರಾದ ಉಪನಾಯಕರನ್ನು (ಅಧಿಕಾರಿಗಳು) ನೇಮಿಸಿದ್ದನು. ಅದೇ ರೀತಿ ನಾರಾಯಣ ದೇವರ ಕೆರೆಗೆ ೯ ಮೈಲು ದೂರದಲ್ಲಿದ್ದ ಕಡಲಬಾಳು ಗ್ರಾಮದಲ್ಲಿ ಹವಾಲ್ದಾರ ಮುದ್ದು ರಂಗಪ್ಪನೆಂಬ ಬ್ರಾಹ್ಮಣನನ್ನು ನೇಮಿಸಿದ್ದನು. ಈ ಮುದ್ದುರಂಗಪ್ಪನು ೬೦ ಹಳ್ಳಿ ಜಹಗೀರುದಾರನಾಗಿದ್ದನು.[೬]

ವಿಜಯನಗರ ಸಾಮ್ರಾಜ್ಯದ ರಾಜ ಗುರುಗಳಾದ ವ್ಯಾಸರಾಯರು (ಸಂಸ್ಕೃತ ವಿದ್ವಾಂಸರು) ೧೫ನೇ ಶತಮಾನದ ಉತ್ತರಾರ್ಧದಲ್ಲಿ ತಾವು ಸಂಚರಿಸಿದಲ್ಲೆಲ್ಲ ರಾಜ್ಯ ಸ್ಥಿರತೆಗೆ ಬೆಂಬಲವಾಗಿ ಧರ್ಮವೂ ಇರಲೆಂಬಂತೆ ದೇಶದ ನಾನಾ ಭಾಗಗಳಲ್ಲಿ ಸುಮಾರು ೭೩೨ ಪ್ರಾಣದೇವರ ಪ್ರತಿಷ್ಠೆ ಮಾಡಿದರು. ಹಂಪೆಯಲ್ಲಿ ಯಂತ್ರೋದ್ಧಾರ ಪ್ರಾಣದೇವರ ಪ್ರತಿಷ್ಠಾಪನೆಯಿಂದ ಈ ಕೆಲಸ ಆರಂಭವಾಗಿರಬೇಕು. ದೇವಸ್ಥಾನವೆಂದರೆ ಅದೊಂದು ಸಂಸ್ಥೆ. ಜನರ ಏಕೀಕರಣಕ್ಕೆ, ಸೋದರ ಭಾವದ ಜಾಗೃತಿಗೆ, ಅದೊಂದು ಸಾಧನ ಮತ್ತು ಧರ್ಮಕ್ಕೂ ಸಾಧನವಾಗಿದೆ. ಹೀಗೆ ಎರಡನ್ನು ಸಾಧಿಸುವ ಪ್ರಯತ್ನ ಅದಾಗಿತ್ತು.[೭]

ಶ್ರೀ ವ್ಯಾಸರಾಯರು ಸಂಚಾರ ನಿಮಿತ್ತ ಈ ಊರಿಗೆ ಬಂದಾಗ ಹನುಮಂತನ ವಿಗ್ರಹ ನೋಡಿ ಇದಕ್ಕೆ ಸರಿಯಾದ ಒಂದು ಗುಡಿಯನ್ನು ಕಟ್ಟಿಸಿ ವಿಧಿ ಪೂರ್ವಕ ಪ್ರತಿಷ್ಠಾಪನೆ ಮಾಡಬೇಕೆಂದು ಮನಸ್ಸಿನಲ್ಲಿ ಹುಟ್ಟಿದ ಕಾರಣ ತಮ್ಮ ಇಚ್ಛೆಯನ್ನು ಊರಿನ ಜನರಿಗೆ ತಿಳಿಸಿದಾಗ ಜನರು ಅದಕ್ಕೆ ಸಂತೋಷದಿಂದ ಒಪ್ಪಿ ಕೂಡಲೇ ಏರ್ಪಾಡು ಮಾಡಿ ಒಂದು ಶಾಶ್ವತವಾದ ಗುಡಿಯನ್ನು ಕಟ್ಟಿ ಶ್ರೀ ವ್ಯಾಸರಾಯರಿಂದಲೇ ಅದರ ಪ್ರತಿಷ್ಠಾಪನೆ ಮಾಡಿಸಿದರು.[೮]



## ಅಡಿಟಿಪ್ಪಣಿಗಳು

೧. ಡಾ. ಅರ್ಜುನ ಯ. ಗೊಳಸಂಗಿ. ಗೊಳಸಂಗಿ ಗ್ರಾಮ ಒಂದು ಸಾಂಸ್ಕೃತಿಕ ಅಧ್ಯಯನ, ಪುಟ.೧

೨. ಕೆ. ಪ್ರಹ್ಲಾದಾಚಾರ್ಯ. ಕಡಲಬಾಳುರಾಯರ ಚರಿತ್ರೆ, ಪುಟ.೧೦-೧೧

೩. ಡಾ. ಟಿ. ಗೋವಿಂದರಾಜು. ಚೆನ್ನಾದೇವಿ ಅಗ್ರಹಾರ ಜಾನಪದೀಯ ಅಧ್ಯಯನ, ಪುಟ.೪೯

೪ ಮೇಟಿಕೊಟ್ರಪ್ಪ. 'ಹಗರಿಬೊಮ್ಮನಹಳ್ಳಿ ತಾಲೂಕು ದರ್ಶನ', ಸೂರ್ಯಕಾಂತಿ ಸ್ಮರಣಸಂಚಿಕೆ ಪುಟ.೨೬

೫. ಕೆ. ಚೆನ್ನಬಸವನಗೌಡ. ನಾನೊಬ್ಬ ಸಾರ್ವಜನಿಕ (ಆತ್ಮಕಥೆ) ಪುಟ.೯೫

೬. ಕೆ. ಪ್ರಹ್ಲಾದಾಚಾರ್ಯ. ಕಡಲಬಾಳು ರಾಯರ ಚರಿತ್ರೆ, ಪುಟ.೩೬-೩೭

೭. ಜಯತೀರ್ಥ ರಾಜಪುರೋಹಿತ. ವ್ಯಾಸರಾಯರು, ಪುಟ.೪೭

೮. ಕೆ. ಪ್ರಹ್ಲಾದಾಚಾರ್ಯ. ಕಡಲಬಾಳು ರಾಯರ ಚರಿತ್ರೆ, ಪುಟ.೧೦

## ಅಧ್ಯಾಯ ಮೂರು

# ಆಂಜನೇಯಸ್ವಾಮಿ

# ಅಧ್ಯಾಯ ೩

# ಆಂಜನೇಯ ಸ್ವಾಮಿ

ಹನುಮಂತ, ಅಶ್ವತ್ಥಾಮ, ಬಲಿ, ವ್ಯಾಸ, ವಿಭೀಷಣ, ಕೃಪ, ಪರಶುರಾಮ ಈ ಏಳು ಜನರು ಚಿರಂಜೀವಿಗಳು ಎಂದು ಪುರಾಣಗಳು ಹೇಳುತ್ತವೆ. ಇವರಲ್ಲಿ ಹನುಮಂತ ಮಾತ್ರ ಜಗತ್ತು ಲಯವಾಗುವವರೆಗೆ ಇರುತ್ತಾನೆ. ಉಳಿದವರೆಲ್ಲ ಕೇವಲ ದೀರ್ಘಾಯುಷಿಗಳು ಮಾತ್ರ.

## ೩.೧. ಪದನಿಷ್ಪತ್ತಿ

ಆಂಜನೇಯನಿಗೆ-ಅಂಜನಾಳಮಗ-ಹನುಮಂತ-ಹನುಮ-ಹನುಮತ್-ಹನುಮನ ಮುನ್ದೆ ಹಾರೋ ಗುಬ್ಬಿಯೇ?-ಹನುಮನಹಕ್ಕಿ ಎಂದು ಅರ್ಥೈಯಿಸಲಾಗಿದೆ.[೧] ಅಲ್ಲದೆ ಮಾರುತಿ, ವಾಯುಪುತ್ರ, ಪವನಪುತ್ರ, ಹನುಮಪ್ಪ, ಪ್ರಾಣದೇವರು ಎಂದು ಸಹ ಕರೆಯುತ್ತಾರೆ.

'ಹನು(ನೂ)' ಎಂದರೆ 'ಉಬ್ಬಿದ ಗದ್ದ' ಅಥವಾ 'ದವಡೆ' ಊದಿದ ಗದ್ದ ಅರ್ಥಾತ್ 'ಹನು' ಉಳ್ಳವನನ್ನು 'ಹನುಮಂತ' ಅಂದರೆ 'ಊದಿಕೊಂಡ ಗದ್ದದವ' ಎಂಬ ಅರ್ಥ ಬರುವಂತೆ ಅಣಕದ ಹೆಸರು ಬಂದಂತೆ ತೋರುತ್ತದೆ. 'ಹನು' ಎಂದರೆ 'ಆಜಾನುಬಾಹು' ಎಂಬ ಅರ್ಥವೂ ಬರಬಹುದು. 'ಹನುಮಿಸು' ಎಂದರೆ ನೆಗೆ, ಹಾರು, ಲಂಘಿಸು ಎಂಬ ಅರ್ಥಗಳೂ ಬರುವುದರಿಂದ, ಹಾರಾಡುವ ಅಸಾಧಾರಣ ಶಕ್ತಿ ಹೊಂದಿರುವನೆಂಬ ಕಲ್ಪನೆಯಿಂದಲೂ ಹನುಮಂತ ಎಂಬ ಹೆಸರು ಬಂದಿರಬಹುದಾಗಿದೆ.

ಪೌರಣಿಕ ಕಥೆಯಂತೆ ಅಂಜನಾದೇವಿಯ ಮಗನಾದ್ದರಿಂದ ಹನಮಂತನಿಗೆ 'ಆಂಜನೇಯ' ಎಂಬ ಹೆಸರು ಬಂದಿತು. ಆದರೆ 'ಅಂಜನ' ಎಂದರೆ 'ಬಯಕೆಗಪ್ಪು' ಎಂಬ ಅರ್ಥವಿದೆ. ಇನ್ನೊಂದು ಪುರಾಣದ ಕಥೆಯಂತೆ ಈತ ಗಾಳಿ ದೇವರು. ಮರುತನಿಗೆ ಹುಟ್ಟಿದುದರಿಂದ 'ಮಾರುತಿ' ಎಂಬ ಹೆಸರು ಬಂದಿದೆ ಎನ್ನಲಾಗುತ್ತದೆ. ಆದರೆ ಈತನಲ್ಲಿ ಅಂತರಿಕ್ಷದಲ್ಲಿ ಹಾರಾಡುವ ವಿಲಕ್ಷಣ ಶಕ್ತಿ ಇರುವುದೆಂಬ ಕಲ್ಪನೆಯಿರುವುದರಿಂದ 'ಮಾರುತಿ' ಎಂಬ ಹೆಸರು ಬಂದಿರಲೂ ಸಾಧ್ಯವಿದೆ.

## ೩.೨. ಹಿನ್ನೆಲೆ

ಆಂಜನೇಯನ ಹುಟ್ಟಿನ ಬಗ್ಗೆ ಪೌರಾಣಿಕ ಮೂಲಗಳನ್ನು ಆವಲೋಕಿಸಬಹುದುದಾಗಿದೆ. ಒಂದು ಪೌರಾಣಿಕ ಕಥೆಯಂತೆ ತಾಯಿ ಅಂಜನಾದೇವಿ, ತಂದೆ ಕೇಸರಿ, ಇಬ್ಬರೂ ಗಂಧರ್ವಲೋಕಕ್ಕೆ ಸೇರಿದವರು. ಸ್ಫುರದ್ರೂಪಿ ಅಂಜನೆಗೆ ಬಹಳ ದಿನಗಳವರೆಗೆ ಮಕ್ಕಳಾಗಲಿಲ್ಲ. ವನದಲ್ಲಿ ತಿರುಗಾಡುತ್ತಿರುವಾಗ

ವಾಯುದೇವನು ಈಕೆಯ ಸೌಂದರ್ಯಕ್ಕೆ ಮಾರುಹೋಗಿ, ಇವಳೊಂದಿಗೆ ಕೂಡಿದುದರಿಂದ ಆಂಜನೇಯ ಅಥವಾ ಮಾರುತಿ ಜನಿಸಿದನು. ಇದು ರಾಮಯಣ ಹೇಳುವ ಕಥೆ.

ವೀರಶೈವ ಪುರಾಣಗಳು ಹನುಮಂತನು ಶಿವನ ಮಗನೆಂದು ಹೇಳುತ್ತವೆ. ಕಪಿಗಳ ಕೂಡುವಿಕೆಯನ್ನು ಕಂಡ ಶಿವನು, ಪಾರ್ವತಿಯೊಂದಿಗೆ ಅವುಗಳಂತೆ ಕೂಡಿದಾಗ ಆಕೆ ಗರ್ಭಧರಿಸಿದಳು. ಆದರೆ ಆ ಗರ್ಭದ ಭಾರ ತಾಳಲಾಗದೆ, ವಾಯುವಿನ ಮೂಲಕ ಕುರುಡಿ ಅಂಜನಾದೇವಿಗೆ ಮುಟ್ಟಿಸಲು ಅದನ್ನು ಸೇವಿಸಿದಳು. ಓಗೆ ಗರ್ಭಧರಿಸಿ ಆಂಜನೇಯನನ್ನು ಹೆತ್ತಳು.

ಮಾನವನು ವಿಕಾಸಗೊಂಡ ಮಂಗ. ಹನುಮಂತನ ಪೂಜೆ ಮಾಡುವುದರ ಗೂಡಾರ್ಥವೆಂದರೆ 'ಮಾನವನು ತನ್ನ ಹಳೆಯ ರೂಪವನ್ನು ಪೂಜೆ ಮಾಡಿದಂತೆ' ಎಂದು ಹೇಳಲಾಗುತ್ತದೆ. ಮಂಗ ಮಾನವನ ಆತ್ಮ ಹೊಂದಿದೆ ಎಂಬ ಕಲ್ಪನೆಯೊಂದಿದೆ. ಇದರಿಂದ ಅದನ್ನು ಕೊಲ್ಲಬಾರದೆಂಬ ನಂಬುಗೆ ಪ್ರಚಲಿತದಲ್ಲಿ ಬಂದಿದೆ. ಈಗಲೂ ಮಂಗ ಸತ್ತರೆ ಹನುಮಂತನ ಗುಡಿಯಲ್ಲಿ ಕೂಡ್ರಿಸಿ, ಮಾನವನಿಗೆ ಮಾಡುವ ಸಂಸ್ಕಾರದಂತೆಯೇ ಮಾಡುತ್ತಾರೆ. ಮಂಗನನ್ನು ಕೊಂದವನು ಮರುಜನ್ಮದಲ್ಲಿ ಮಂಗನಾಗಿಯೇ ಜನಿಸುವನು ಎಂಬ ನಂಬುಗೆಯಿದೆ. ಹನುಮಂತನ ಪೂಜೆ ಭಾರತದಲ್ಲಷ್ಟೇ ಅಲ್ಲದೆ, ಜಗತ್ತಿನ ಹಲವೆಡೆಗಳಲ್ಲಿ ಕಾಣಸಿಗುತ್ತದೆ.

ಈ ಹನುಮಂತನ ಪ್ರಸ್ತಾಪ ವೇದಗಳಲ್ಲಿ ಬರುವುದಿಲ್ಲ ಎಂಬ ಕಾರಣಕ್ಕಾಗಿ ಆತನ ಆರಾಧನೆ ಬಹಳಷ್ಟು ಪ್ರಾಚೀನವಾಗಿರದೆ ಒಂದು ಕಾಡು ಜನಾಂಗದಿಂದ ದತ್ತು ಬಂದುದಾಗಿರಬೇಕೆಂದು ಹೇಳಲಾಗುತ್ತಿದೆ. ಆರ್ಯರು ದ್ರಾವಿಡರನ್ನು ಸೋಲಿಸಿ, ದಕ್ಷಿಣಕಟ್ಟಿದ ನಂತರ, ದ್ರಾವಿಡರು ತಾವು ವಾಸಮಾಡಿದಲ್ಲೆಲ್ಲ ರಕ್ಷಣೆಗೆಂದು ತಮ್ಮ ಪ್ರಬಲ ದೇವತೆ ಹನುಮಂತನನ್ನು ಯಾವುದೇ ಕಂಟಕಗಳಿಂದ ಕಾಪಾಡಲು ಗ್ರಾಮದ ಹೊರಬಾಗಿಲಿಗೆ ಗುಡಿಕಟ್ಟಿ ಇಟ್ಟರು. ಈಗಲೂ ಪ್ರತಿ ಊರಿನ ಹೊರಗೆ ಹನುಮಂತನ ದೇವಾಲಯ ಇರಲು ಕಾರಣ ಬಹುಶಃ ಆ ರೂಢಿಯೇ ಸಾಂಪ್ರದಾಯಿಕವಾಗಿ ಬೆಳೆದು ಬಂದಂತೆ ತೋರುತ್ತದೆ. ಹೀಗೆ ಸ್ಥಳೀಯವಾಗಿ ಮಹತ್ವ ಪಡೆದ ಹನುಮಂತನು ತನ್ನ ಜನಗಳಿಂದ ಪೂಜೆಗೈಸಿಕೊಳ್ಳುತ್ತ, ಕ್ರಮೇಣ ಜನಪ್ರಿಯತೆ ಪಡೆಯುತ್ತ, ನಂಬುಗೆಗಳು ಪ್ರಬಲವಾಗುತ್ತ ಹೋಗಿ ಪುರಾಣಗಳಲ್ಲಿ ಸ್ಥಾನ ಪಡೆದು, ಭಾರತದಾದ್ಯಂತ ಬಹು ದೊಡ್ಡ ದೇವರಾಗಿ ಮಾರ್ಪಟ್ಟನು.[೨]

**ಆಂಜನೇಯ ಒಕ್ಕಣ್ಣನವನಾದದ್ದು :** ಪುರಾಣೈತಿಹಾಸಗಳಲ್ಲಿ ನಮ್ಮ ಜನಪದರು ಹೇಳುವಂತೆ, ಆಂಜನೇಯ ವಾಯು ಹಾಗೂ ಅಂಜನಾದೇವಿಯ ಮಗ. ಸೂರ್ಯಾಸ್ತದ ಸಮಯದಲ್ಲಿ ಆಂಜನೇಯ ಹುಟ್ಟಿದನಂತೆ. ಭೂಮಿಗೆ ಬಂದ ಕೆಲವೇ ಕ್ಷಣಗಳಲ್ಲಿ ಅಮ್ಮಾ ಹಸಿವೆಯಾಗಿದೆ ಏನು ತಿನ್ನಬೇಕು ಎಂದು ಕೇಳಿದನಂತೆ. ಅದಕ್ಕೆ ಅಂಜನಾದೇವಿಯು ಕುರುಡಿಯಾದ್ದರಿಂದ ಹಣ್ಣು ಕೆಂಪಾಗಿರುತ್ತದೆ, ಆದ್ದರಿಂದ ಕೆಂಪಾಗಿರುವುದನ್ನು ತಿನ್ನು ಎಂದಳಂತೆ. ಅವಸರದವನಾಗಿದ್ದರಿಂದ ಹನುಮಂತನು ಹಾರಿ ಹಾರಿ ಕೆಂಪಾಗಿರುವ ಮುಳುಗುವ ಸೂರ್ಯನನ್ನೇ ತಿನ್ನಲು ಹೋದನಂತೆ. ಸೂರ್ಯ ಎಟುಕದ ಕಾರಣ ಆಂಜನೇಯ ಹಾರಿ ಕೊನೆಗೊಮ್ಮೆ ಸಮುದ್ರಕ್ಕೆ ಬಿದ್ದು ಸತ್ತನಂತೆ. ಮಗ ಮನೆಗೆ

ಬಾರದ ಕಾರಣ ಅಂಜನಾದೇವಿ ಅಳುತ್ತಾ ಇದ್ದಳಂತೆ. ತಂದೆಯಾದ ವಾಯು ಮನೆಗೆ ಬಂದು ಅಂಜನಾದೇವಿಯನ್ನು ವಿಚಾರಿಸಿದಾಗ, ಹಣ್ಣು ತಿನ್ನಲು ಹೊರಗೆ ಹೋದ ಮಗ ಬರಲಿಲ್ಲವೆಂದಾಗ ವಾಯು ಎಲ್ಲಾ ದೇವರುಗಳ ಬಳಿಗೆ ಹೋಗಿ ಮಗನನ್ನು ಹುಡುಕಿ ಕೊಡಿರಿ ಎಂದು ಕೇಳಿದನಂತೆ. ನಾಲ್ಕಾರು ದಿನವಾದರೂ ಯಾವ ದೇವರೂ ಕಿವಿಗೆ ಹಾಕಿಕೊಳ್ಳದಿದ್ದಾಗ ಸಿಟ್ಟಿಗೆದ್ದ ವಾಯು ಸ್ವಲ್ಪವೂ ಗಾಳಿ ಬಿಡದೆ ಒಂದು ಮರದ ಪೊಟರೆಯಲ್ಲಿ ಅವಿತುಕೊಂಡಿದ್ದನಂತೆ. ಅಲ್ಲಿ ಮೇಯುತ್ತಿದ್ದ ಕತ್ತೆಗಳಿಗೆ 'ನಿಮಗೆ ಗಾಳಿ ಬೇಕಾದರೆ ಇಲ್ಲಿ ತೆಗೆದುಕೊಳ್ಳಿರಿ. ಆದರೆ ನಾನು ಇಲ್ಲಿದ್ದೇನೆ ಎಂದು ಯಾರಿಗೂ ಹೇಳಬೇಡಿರಿ' ಎಂದಾಗ, ಅದರಂತೆ ಕತ್ತೆಗಳು ಗಾಳಿ ತೆಗೆದುಕೊಂಡು ಅಲ್ಲಿಯೇ ಮೇಯುತ್ತಿದ್ದವಂತೆ. 'ಒಂದು ವೇಳೆ ನಾನು ಇಲ್ಲಿದ್ದೇನೆ ಎಂದು ಹೇಳಿದರೆ ನಿಮ್ಮ ಮೂಗನ್ನು ಕೊಯ್ದು ಬಿಡುತ್ತೇನೆ' ಎಂದು ವಾಯು ಹೇಳಿದ್ದನಂತೆ. ಇತ್ತ ದೇವಾನುದೇವತೆಗಳು ಹಾಹಾಕಾರ ಮಾಡುತ್ತಾ ಎಲ್ಲಿ ಗಾಳಿದೇವ ಎಂದು ಹುಡುಕುತ್ತಾ ಎಲ್ಲರೂ ಅಲ್ಲಿಗೆ ಬಂದರಂತೆ. ಅಲ್ಲಿ ಕತ್ತೆಗಳು ಗಾಳಿ ತೆಗೆದುಕೊಂಡು ಬರುವುದನ್ನು ಗಮನಿಸಿ, ಅವುಗಳನ್ನು ಕೇಳಿ ವಾಯು ದೇವನನ್ನು ಕಾಡಿಬೇಡಿ ಹೊರಗೆ ಕರೆದಾಗ ಹೊರಗೆ ಬಂದವನೇ ಕತ್ತೆಗಳ ಮೂಗನ್ನು ಕೊಯ್ದನಂತೆ. ಅದಕ್ಕೆ ಇಂದಿಗೂ ಕತ್ತೆಗಳ ಮೂಗು ಕೊಯ್ದು ಹಾಗೆ ಇದೆ ಎಂದು ಜನಪದರು ಹೇಳುತ್ತಾರೆ. ನಂತರ ಹೊರಗೆ ಬಂದ ವಾಯು ತನ್ನ ಮಗನನ್ನು ಹುಡುಕಿಕೊಡಿ ನಂತರ ಗಾಳಿ ಬೀಸುತ್ತೇನೆ ಎಂದು ಹೇಳಿದಾಗ ಎಲ್ಲಾ ದೇವಾನುದೇವತೆಗಳು ಸಮುದ್ರದ ದಡಕ್ಕೆ ಬಂದು ಹನುಮಂತನ ಹೆಣವನ್ನು ತಿಂದ ಎಲ್ಲಾ ಮೀನು, ಏಡಿ, ಆಮೆಗಳನ್ನು ಕರೆದರಂತೆ. ಎಲ್ಲ ಪ್ರಾಣಿಗಳು ಕೈ, ಕಾಲು, ಬಾಲ, ಹೊಟ್ಟೆ ಹೀಗೆ ಒಂದೊಂದಾಗಿ ಎಲ್ಲಾ ಅಂಗಗಳನ್ನು ಕೊಟ್ಟಾಗ ಏಡಿಯು ಒಂದು ಕಣ್ಣನ್ನು ನುಂಗಿತ್ತಂತೆ. ಆದ್ದರಿಂದ ಆ ಕಣ್ಣುಕೊಡು ಎಂದು ಏಡಿಯನ್ನು ಕೇಳಿದಾಗ ಏಡಿ ಕಣ್ಣನ್ನು ಕೊಡಲಿಲ್ಲವಂತೆ. ಸಿಟ್ಟಿಗೆದ್ದ ದೇವತೆಗಳು 'ಏ ಅಡ್ಡಾಡಿ ಕೊಡುಕಣ್ಣು' ಎಂದರಂತೆ. ಅದಕ್ಕೆ ಏಡಿಯು ಅಡ್ಡಾದರೂ ನಡೆದೇನು ಕಣ್ಣು ಕೊಡುವುದಿಲ್ಲ ಎಂದಿತಂತೆ. ಆದ್ದರಿಂದ ಹನುಮಂತನು ಅಂದಿನಿಂದ ಒಕ್ಕಣ್ಣಿನ ಹನುಮಂತನಾದನು. ದೇವತೆಗಳು ಮಗನನ್ನು ಬದುಕಿಸಿಕೊಟ್ಟನಂತರ ವಾಯು ಮೂರು ಲೋಕಗಳಲ್ಲಿ ಗಾಳಿಯನ್ನು ಬೀಸಿದನೆಂದು ಜನಪದ ವಕ್ತೃಗಳು ಹನುಮಂತನ ಬಗ್ಗೆ ಕಥೆ ಹೇಳುತ್ತಾರೆ.

### ೩.೩. ನೆಲೆಗೊಂಡ ಬಗ್ಗೆ ಇರುವ ಐತಿಹ್ಯ

ಪರಂಪರೆಯಲ್ಲಿ ನಂಬಿಕೆಯನ್ನು ಇರಿಸಿಕೊಂಡ ನಮ್ಮ ಜನಪದರು ಹನುಮಂತ ದೇವರಿಗೆ ಪ್ರತ್ಯೇಕ ಸ್ಥಾನ ಕೊಟ್ಟಿದ್ದಾರೆ. ಕರ್ನಾಟಕದ ಪ್ರತಿಹಳ್ಳಿ, ಪಟ್ಟಣಗಳಲ್ಲಿಯೂ ಹನುಮಂತನ ದೇವಸ್ಥಾನಗಳನ್ನು ಕಾಣಬಹುದು. ಅಪಾರ ಭಕ್ತರನ್ನು ಹೊಂದಿರುವ ಈತನಿಗೆ ಹರಕೆಗಳನ್ನು ಕಟ್ಟಿಕೊಳ್ಳುವ ಜನಸಮೂಹವೂ ಉಂಟು. ತಮ್ಮ ಇಷ್ಟಾರ್ಥಸಿದ್ಧಿಸಲಿ ಎಂದು ವ್ರತ ಆಚರಿಸುವ ಭಕ್ತವೃಂದವೂ ಅನೇಕ.

ಎಲ್ಲಾ ವಯೋ ಮಾನದವರಿಗೂ ಪ್ರಿಯವಾದ ಈ ದೇವರು ಜನಪದರಿಗೆ ನೆಚ್ಚಿನ ದೇವತೆ. ಊರು ಇದ್ದ ಕಡೆ ಹನುಮಪ್ಪನ ಗುಡಿ ಇದ್ದೇ ಇರುತ್ತದೆ. 'ಊರು ಸುಟ್ಟರೂ ಹನುಮಪ್ಪ ಊರ ಹೊರಗೆ' ಎನ್ನುವ ಗಾದೆ ಮಾತಿನಂತೆ ಹನುಮಂತನ ಗುಡಿ ಇಲ್ಲದ ಹಳ್ಳಿಯೇ ಇಲ್ಲ ಎನ್ನಬಹುದು.

ಗುಡಿ ಇಲ್ಲದಿದರೂ ಊರ ಮುಂದೆ ಒಂದು ದೊಡ್ಡ ಬಂಡೆಯಲ್ಲಾದರೂ ಆತನ ಚಿತ್ರ ಇರುತ್ತದೆ. ಇದು ಭಾರತದಾದ್ಯಂತ ಕಂಡು ಬರುವಂತಹದು. ಹಾಗಾಗಿ ಹನುಮಂತನ ಜನಪ್ರಿಯತೆ ಇನ್ನಾವ ದೇವತೆಗೂ ಇಲ್ಲವೆಂಬುದು ಸತ್ಯ. ಇದು ಆತನ ಉನ್ನತ ವ್ಯಕ್ತಿತ್ವವನ್ನು ಎತ್ತಿ ತೋರಿಸುತ್ತದೆ.[೩]

ಇಂತಹ ಜನಪ್ರಿಯತೆಯನ್ನು ಹೊಂದಿರುವ ಆಂಜನೇಯ ದೇವಸ್ಥಾನ ಕಡಲಬಾಳು ಗ್ರಾಮದಲ್ಲಿ ಭವ್ಯಯಾಗಿ ತಲೆ ಎತ್ತಿನಿಂತಿದೆ. ಇಲ್ಲಿ ಆಂಜನೇಯ ನೆಲೆಗೊಳ್ಳಲು ತನ್ನದೇ ಆದ ಐತಿಹ್ಯಗಳನ್ನು ಪಡೆದುಕೊಂಡಿದ್ದಾನೆ.

'ಐತಿಹ್ಯ' ಪದವನ್ನು 'Legend' ಎಂಬುದಕ್ಕೆ ಸಂವಾದಿಯಾಗಿ ಬಳಸಲಾಗುತ್ತಿದೆ. ಲೆಜೆಂಡ್ ಮೂಲತಃ ಲ್ಯಾಟಿನ್ ಪದವಾಗಿದೆ. ಅಲ್ಲಿ ಅದಕ್ಕೆ 'Things to be Read' ಎಂಬ ಅರ್ಥವಿದೆ. ಫ್ರೆಂಚ್ ಭಾಷೆಯಲ್ಲಿ ಇದೇ ಅರ್ಥ ಉಳಿದು ಬೆಳೆದುಕೊಂಡು ಬಂದಿದೆ. ಇವು ಪ್ರಾರ್ಥನಾ ಮಂದಿರಗಳಲ್ಲಿ ಪಠಣ ಮಾಡಬಹುದಾದ ವಿಷಯಗಳಾಗಿದ್ದವು. ಚಾರಿತ್ರಿಕವಾಗಿ ಈ ಲೆಜೆಂಡ್ ಪದದ ಅರ್ಥ ಒಂದೇ ರೀತಿಯಾಗಿ ಉಳಿದಿಲ್ಲ. ಪಾಶ್ಚಾತ್ಯ ದೇಶಗಳಲ್ಲಿ ಜಾನಪದ ಅಧ್ಯಯನ ಬೆಳೆದು ಬಂದಂತೆ ಅದರ ಅರ್ಥದಲ್ಲಿ ವ್ಯತ್ಯಾಸವಾಗತೊಡಗಿತು. ೧೯-೨೦ನೆಯ ಶತಮಾನದ ಹೊತ್ತಿಗೆ ಲೆಜೆಂಡ್ ಪದವು 'ಪರಂಪರೆಯಿಂದ ಬಂದದ್ದು' ಎಂಬ ವಿಶಾಲಾರ್ಥದಲ್ಲಿ ಬಳಕೆಯಾಗತೊಡಗಿತು.

ಕಿವಿಯಿಂದ ಕಿವಿಗೆ ಹರಿದು ಬಂದಿರುವ ಮಾತೊಂದು ಜನಪ್ರಿಯವೂ, ನಂಬುವಂತೆಯೂ ಇದ್ದಾಗ ಅದನ್ನು ಜನರು 'ಐತಿಹ್ಯ' ವೆಂದು ಕರೆಯುತ್ತಿದ್ದರು. ಸತ್ಯದ ಶೋಧಕ್ಕೆ ಇದೂ ಒಂದು ಪ್ರಮಾಣವಾಗಿದೆ. ಐತಿಹ್ಯಕ್ಕೆ ಸಂಭಾವ್ಯ ಅಂಶಗಳು ಮೇಲಿಂದ ಮೇಲೆ ಸೇರುತ್ತಿದ್ದರೂ ಮೂಲ ಸತ್ಯ ಪೂರ್ತಿ ನಾಶವಾಗುವುದಿಲ್ಲ. ಐತಿಹ್ಯದ ನಿರೂಪಕ ಕೊಡುವ ಭೌತಿಕ ಆಧಾರವು ಕಣ್ಣೆದುರಲ್ಲಿ ಇರುತ್ತದೆ. ಆ ಆಧಾರಕ್ಕೂ ನಿರೂಪಣೆಗೂ ವೈಜ್ಞಾನಿಕ ಸಂಬಂಧ ಇರುವುದಿಲ್ಲ. ಸುಸಂಬದ್ಧ ತರ್ಕ ಮಾತ್ರ ಇರುತ್ತದೆ. ಐತಿಹ್ಯಗಳಲ್ಲಿ ಮೂರು ಬಗೆ ಕಾಣಬಹುದು. ೧. ವ್ಯಕ್ತಿ ಪ್ರಧಾನ ಐತಿಹ್ಯಗಳು ೨. ಸ್ಥಳ ಪ್ರಧಾನ ಐತಿಹ್ಯಗಳು ೩. ಘಟನಾ ಪ್ರಧಾನ ಐತಿಹ್ಯಗಳು[೪]

## ೧. ಐತಿಹ್ಯ

ಬಹಳ ಶತಮಾನಗಳ ಹಿಂದೆ ಕಡಲಬಾಳು ಗ್ರಾಮದಲ್ಲಿ ಆಂಜನೇಯ ನೆಲೆಗೊಳ್ಳಲು ಊರಿನ ಹಿರಿಯರು ಹಾಗೂ ವೈದಿಕ ಮನೆತನದ ಪೂರ್ವೀಕರಿಂದ ಕೇಳಿ ಬಂದ ಐತಿಹ್ಯ ಹೀಗಿದೆ.

ಈ ಗ್ರಾಮದ ಮುಂದೆ ಹರಿಯುವ ಹಳ್ಳದ ಪಶ್ಚಿಮ ದಿಕ್ಕಿನ ಮೂಲೆಯೊಂದರಲ್ಲಿ ಒಂದು ತಿರುವಿನ ಮಡುವಿದೆ. ಆಗಿನ ಕಾಲದಲ್ಲಿ ಈ ಹಳ್ಳದಲ್ಲಿ ಭರ್ತಿ ಪ್ರವಾಹ ಇರುತ್ತಿದ್ದುದರಿಂದ ಆಳವಾಗಿ ನೀರು ಈ ಮಡುವಿನಲ್ಲಿ ಇರುತ್ತಿದ್ದಿತು. ಆ ಊರಿನ ದಾಸಯ್ಯನೊಬ್ಬನು ತನ್ನ ಕಾರ್ಯಾಂತರ ನಿಮಿತ್ತದಿಂದ ಈ ಮಡುವಿರುವ ಕಡೆಗೆ ಹೋದಾಗಲೆಲ್ಲ ಆ ಮಡುವಿನೊಳಗಿಂದ "ನನ್ನನ್ನು ಕರಕಂಡು ಹೋಗು, ಕರಕಂಡು ಹೋಗು" ಎಂಬ ಧ್ವನಿ ಅವನಿಗೆ ಕೇಳಿ ಬರುತ್ತಿತ್ತು. ಅವನು ಅದನ್ನು ಎಷ್ಟೋ ದಿನ

ಲಕ್ಷಿಸಿರಲಿಲ್ಲ. ಆಮೇಲೆ ಒಂದು ದಿನ ಅವನ ಕನಸಿನಲ್ಲಿ ಮಾರುತಿ ಕಾಣಿಸಿಕೊಂಡು "ನಾನು ಆ ಮಡುವಿನಲ್ಲಿ ಇದ್ದೇನೆ. ನಾನು ಕಡಲಿನಲ್ಲಿ ಬಾಳಿದವ. ಉಸುಕಿನ ಮೇಲೆ ಮಲಗಿದಾಗ ಪ್ರವಾಹದಲ್ಲಿ ಕೊಚ್ಚಿಕೊಂಡು ಭೂಗರ್ಭದಲ್ಲಿಯೇ ಇಲ್ಲಿಗೆ ಬಂದು ಸೇರಿ ಇಲ್ಲೇ ಕಲ್ಲು ಮೂರ್ತಿಯಾಗಿ ಈ ಮಡುವಿನಲ್ಲಿದ್ದೇನೆ. ಕಾರಣ ನನ್ನನ್ನು ಹೊರತೆಗೆದು ಒಂದು ಬಂಡಿಯಲ್ಲಿ ಕರೆದೊಯ್ಯಿರಿ. ಆ ಬಂಡಿ ಹೋಗುವಾಗ ನಿಮ್ಮೂರಿನ ಒಂದು ಸ್ಥಳದಲ್ಲಿ ಮುರಿದು ಬೀಳುತ್ತದೆ. ಆ ಜಾಗದಲ್ಲಿ ನನ್ನನ್ನು ಸ್ಥಾಪಿಸಿ, ಗುಡಿಕಟ್ಟಿ, ನನಗೆ ಪೂಜೆ ಮಾಡಿರಿ. ನಿಮ್ಮ ಗ್ರಾಮದ ಜನರನ್ನೆಲ್ಲ ಸಂರಕ್ಷಣೆ ಮಾಡುತ್ತೇನೆ" ಎಂದು ಸ್ಪಷ್ಟವಾಗಿ ಹೇಳಿದನು. ದಾಸಯ್ಯ ಈ ಎಲ್ಲಾ ಸಮಾಚಾರವನ್ನು ಮರುದಿನ ಗ್ರಾಮದ ಮುಖ್ಯಸ್ಥರ ಮುಂದೆ ಹೇಳಲಾಗಿ ಗ್ರಾಮದ ಮುಖ್ಯಸ್ಥರೆಲ್ಲ ಒಂದು ಬಂಡಿಯನ್ನು ತೆಗೆದುಕೊಂಡು ದಾಸಯ್ಯ ತೋರಿಸಿದ ಸ್ಥಳಕ್ಕೆ ಹೋದರು. ಆಗ ದಾಸಯ್ಯ ಆ ಮಡುವಿನಲ್ಲಿ ಮುಳುಗಿ ಎರಡೂ ಕೈಯಲ್ಲಿ ಮಾರುತಿಯ ವಿಗ್ರಹವನ್ನು ಹೊತ್ತುಕೊಂಡು ಮೇಲೆದ್ದನು. ಆಗ ಊರಿನವರೆಲ್ಲ ಸೇರಿ ಮಾರುತಿಯ ವಿಗ್ರಹವನ್ನು ತಾವು ತಂದ ಬಂಡಿಯಲ್ಲಿ ಇಟ್ಟುಕೊಂಡು ಗ್ರಾಮಕ್ಕೆ ಬಂದರು. ಈಗ ಮಾರುತಿ ಗುಡಿ ಇರುವ ಸ್ಥಳಕ್ಕೆ ಆ ಬಂಡಿ ಬಂದ ಕೂಡಲೇ ಅದು ಅಲ್ಲಿ ಮುರಿದು ಮಾರುತಿಯ ವಿಗ್ರಹ ಕೆಳಗೆ ಬಿತ್ತು. ಕಾರಣ ಅಲ್ಲಿಯೇ ಆ ಮಾರುತಿಯನ್ನು ಸ್ಥಾಪನೆ ಮಾಡಿ ಒಂದು ಸಣ್ಣ ಗುಡಿ ಕಟ್ಟಿ ಪೂಜಿಸಿದರು.

ಈ ಮಾರುತಿ ದಾಸಯ್ಯನ ಕನಸಿನಲ್ಲಿ ಇನ್ನು ಒಂದು ವಿಷಯ ಹೇಳಿದನು. ತನ್ನ ವಿಗ್ರಹ ಸಿಕ್ಕ ಸ್ಥಳದಲ್ಲಿ ಅದೇ ಮಡುವಿನಲ್ಲಿ ತನ್ನ ಅಣ್ಣನಾದ ಇನ್ನೊಂದು ತನಗಿಂತಲೂ ದೊಡ್ಡದಾದ ಮಾರುತಿಯ ವಿಗ್ರಹ ಇದೆ. ಅದಕ್ಕಾಗಿ ಆಗಾಗ್ಗೆ ತನಗೆ ತನ್ನ ಅಣ್ಣನ ಭೇಟಿಯನ್ನು ಮಾಡಿಸಬೇಕೆಂದು ಹೇಳಿದನು. ಈ ಕಾರಣಕ್ಕಾಗಿ ಈ ಮಾರುತಿಯ ಯಾವುದೇ ಉತ್ಸವವು ಹೊರಟಾಗ ಉತ್ಸವ ಮಾರುತಿಯನ್ನು ಪಾಲಕಿಯಲ್ಲಿ ಕೂಡಿಸಿಕೊಂಡು ಆ ಮಡುವಿನ ಹತ್ತಿರ ಒಯ್ದು ಅಲ್ಲಿ ಮಂಗಳಾರತಿ ಮಾಡಿ ವಾಪಾಸು ಬರುವ ಪದ್ಧತಿ ಇದೆ."

೨. ಐತಿಹ್ಯ

ಬಹಳ ಶತಮಾನಗಳ ಹಿಂದೆ ಕಡಲಬಾಳು ಗ್ರಾಮದಲ್ಲಿ ಆಂಜನೇಯ ನೆಲೆಗೊಳ್ಳಲು ಆಂಜನೇಯ ಪೂಜೆ ಮಾಡುವ ಪೂಜಾರು ಮನೆತನದ ಪೂರ್ವೀಕರಿಂದ ಕೇಳಿ ಬಂದ ಐತಿಹ್ಯ ಹೀಗಿದೆ.

ಕಡಲಬಾಳು ಗ್ರಾಮ ಮೂಲತಃ ಈಗಿರುವ ಸ್ಥಳದಲ್ಲಿ ಇರಲಿಲ್ಲ. ಈಗಿರುವ ಸ್ಥಳದಿಂದ ಉತ್ತರಕ್ಕೆ ಒಂದು ಕಿಲೋಮೀಟರ್ ದೂರದಲ್ಲಿ ಬಾಚಿಗೊಂಡನಹಳ್ಳಿ ರಸ್ತೆಯ ಪಕ್ಕದ ಸಣ್ಣಗುಡ್ಡ (ರಾಮದೇವರಗುಡ್ಡ)ದ ಹತ್ತಿರ ಇತ್ತು. ಆ ಗ್ರಾಮಕ್ಕೆ 'ರಾಮಾಪುರ' ಎಂಬ ಹೆಸರು ಇತ್ತು. ಆಗ ಅಲ್ಲಿ ಕೆಲವಾರು ಮನೆಗಳು ಮಾತ್ರ ಇದ್ದವು. ಅಲ್ಲಿ ಊರು ಇತ್ತು ಅನ್ನುವುದಕ್ಕೆ ಹೊಲದಲ್ಲಿ ಕೆಲಸ ಮಾಡುವಾಗ ಮನೆಯಲ್ಲಿ ಉಪಯೋಗಿಸುವ ಕೆಲವು ವಸ್ತುಗಳು ಸಿಕ್ಕ ನಿದರ್ಶನಗಳು ಇವೆ.

ಒಮ್ಮೆ ಈ ಊರಿಗೆ ಕೊರಳಲ್ಲಿ ಚಿಗರೆ ಚರ್ಮದ ಹಲಗೆಗಳನ್ನು ಧರಿಸಿದ ಬಾಲಕರಿಬ್ಬರು ದೇಶಾಂತರವಾಗಿ ಬಂದು ಊರೆಲ್ಲಾ ಅಲೆದಾಡಿದರು. ಯಾರು ಇವರ ಬಗ್ಗೆ ನೀವು ಯಾರು ಎಂದು ವಿಚಾರಿಸಲಿಲ್ಲ. ಭಿಕ್ಷಾಟನೆಗೆ ಬಂದವರು ಇರಬಹುದೆಂದು ತಿಳಿದುಕೊಂಡಿದ್ದರು. ಈ ಬಾಲಕರು ಮೂರು-ನಾಲ್ಕು ದಿವಸ ಊರೆಲ್ಲಾ ಅಲೆದಾಡಿದರೂ ಒಂದು ತೊಟ್ಟು ನೀರು, ಆಹಾರ ಸೇವಿಸದಿರುವುದನ್ನು ಊರಿನ ಜನರು ಗಮನಿಸಿದರು. ಊರಿನ ಕೆಲವು ಹಿರಿಯರೆಲ್ಲಾ ಸೇರಿ ಊರಿನ ಜನತೆಗೆ ನೀವೇನಾದರೂ ಕುಡಿಯಲಿಕ್ಕೆ ಮತ್ತು ತಿನ್ನಲಿಕ್ಕೆ ಏನಾದರೂ ಕೊಟ್ಟಿದ್ದೀರಾ? ಅಥವಾ ಆ ಬಾಲಕರು ಯಾರ ಮನೆಗಾದರೂ ಭಿಕ್ಷೆಗೆ ಬಂದಿದ್ದರೇ? ಎಂದು ವಿಚಾರಿಸಿದಾಗ ಎಲ್ಲರಿಂದ ನಾವು ಏನನ್ನು ಕೊಟ್ಟಿಲ್ಲ ಮತ್ತು ಬಾಲಕರು ಯಾರ ಮನೆಗೂ ಭಿಕ್ಷೆಗೆ ಬಂದಿಲ್ಲ ಎಂಬ ಉತ್ತರ ಬಂತು. ಇದರಿಂದ ಇಡೀ ಗ್ರಾಮವೇ ಬೆರಗಾಯಿತು. ನೋಡಲು ಚಿಕ್ಕ ಬಾಲಕರಿದ್ದಾರೆ ಮೂರು-ನಾಲ್ಕು ದಿವಸ ಏನನ್ನೂ ತಿಂದಿಲ್ಲ, ನೀರನ್ನು ಸಹ ಕುಡಿದಿಲ್ಲ. ಆದರೂ ಸಹ ಇವರ ಮುಖದಲ್ಲಿ ಕಳೆಗುಂದಿಲ್ಲ. ಹಸಿವೆ ಎಂಬುದೇ ಇವರಿಗೆ ಗೊತ್ತಿಲ್ಲವೆಂದ ಮೇಲೆ ಈ ಬಾಲಕರು ಯಾರು ಎಂಬುದನ್ನು ತಿಳಿದುಕೊಳ್ಳಬೇಕು ಎಂದು ಇಡೀ ಗ್ರಾಮದ ಜನತೆ ಒಂದು ಕಡೆ ಸಭೆ ಸೇರಿ ಆ ಬಾಲಕರನ್ನು ವಿಚಾರಿಸಿದಾಗ ಅವರು ಮಾತನಾಡಲು ಮತ್ತು ಹೂಂಗುಡಲಿಲ್ಲ ಹಾಗೆಯೇ ನೆಲದ ಕಡೆ ನೋಡುತ್ತಾ ನಿಂತಿದ್ದರು. ಆದರಲ್ಲಿ ಒಬ್ಬ ಬಾಲಕ ಅಲ್ಲೇ ಪಕ್ಕದಲ್ಲಿ ಹಸುವಿನ ಹಾಲು ಕರೆಯುತ್ತಿದ್ದ ಹೆಣ್ಣು ಮಗಳನ್ನು ದಿಟ್ಟಿಸಿ ನೋಡುತ್ತಿದ್ದನು. ಆಗ ಹಿರಿಯರಲ್ಲೊಬ್ಬರು ಹಾಲು ಕುಡಿಯುತ್ತೀರಾ? ಎಂದು ಕೇಳಿದಾಗ ಬಾಲಕರಿಬ್ಬರೂ ತಲೆದೂಗಿದರು. ಕರೆದ ಹಾಲನ್ನು ತಂಬಿಗೆಯಲ್ಲಿ ಹಾಕಿ ಕೊಡಲಿಕ್ಕೆ ಹೋದಾಗ ಕೈಯಲ್ಲಿ ತೆಗೆದುಕೊಳ್ಳದೆ ನೆಲದಲ್ಲಿ ಮಣ್ಣಿನಿಂದ ದೋಣಿ ಮಾಡಿ ಅದರಲ್ಲಿ ಹಾಲನ್ನು ಹಾಕಲು ಕೈಸನ್ನೆ ಮಾಡಿ ತೋರಿಸಿದರು. ಅವರು ಹೇಳಿದಂತೆ ನೆಲದಲ್ಲಿ ಮಣ್ಣಿನ ದೋಣಿ ಮಾಡಿ ಹಾಲನ್ನು ಅದರಲ್ಲಿ ಹಾಕಿದರು. ಆದರೆ ನೆಲ ಹಾಲನ್ನು ಹೀರಿಕೊಳ್ಳಲಿಲ್ಲ. ಆಗ ಬಾಲಕರಿಬ್ಬರೂ ನೆಲದ ಮೇಲೆ ಮಂಡಿಯೂರಿ ಹಾಲನ್ನು ಸೇವಿಸಿದರು. ನೆಲದಲ್ಲಿ ಹಾಕಿದ ಹಾಲು ಬತ್ತದೆ ಇರುವುದನ್ನು ಗಮನಿಸಿದ ಊರಿನ ಹಿರಿಯರು ಇವರು ಸಾಧಾರಣ ಬಾಲಕರಲ್ಲ. ಇವರಲ್ಲಿ ಮಹಾನ್‌ಶಕ್ತಿ ಅಡಗಿದೆ. ಇವರನ್ನು ಹೇಗಾದರೂ ಮಾಡಿ ಯಾರು ಅಂತಹ ತಿಳಿದುಕೊಳ್ಳಬೇಕು ಎಂದು ನಿರ್ಧರಿಸಿದರು. ಅದರಂತೆ ಈ ಬಾಲಕರನ್ನು ಕುರಿತು ನೀವು ಯಾರು? ನಿಮ್ಮ ಕೊರಳಲ್ಲಿ ಕಟ್ಟಿಕೊಂಡಿರುವುದೇನು? ಇಲ್ಲಿಗೇಕೆ ಬಂದಿರುವಿರಿ? ನಿಮ್ಮ ಉದ್ದೇಶವೇನು ಮತ್ತು ನಮ್ಮಿಂದ ನಿಮಗೆ ಏನುಬೇಕು? ಎಂಬುದನ್ನು ದಯವಿಟ್ಟು ತಿಳಿಸಬೇಕು. ನೀವು ಹೇಳಿದ ಪ್ರಕಾರ ನಡೆದು ಕೊಳ್ಳುತ್ತೇವೆ ಎಂದು ಊರಿನ ದೈವದವರು ಆ ಬಾಲಕರಿಗೆ ಸಾಷ್ಟಾಂಗ ನಮಸ್ಕಾರ ಮಾಡಿದರು.

ಆಗ ಬಾಲಕರಿಬ್ಬರೂ ಇಡೀ ದೈವಕ್ಕೆ ಎರಡು ಕೈಗಳನ್ನು ಜೋಡಿಸಿ ಕೈಮುಗಿದರು. ಅದರಲ್ಲಿ ಒಬ್ಬ ಬಾಲಕ ಹೀಗೆಂದನು "ದೈವ ಪ್ರೇರಣೆಯಿಂದ ನಾವು ಈ ಗ್ರಾಮಕ್ಕೆ ಬಂದಿದ್ದೇವೆ. ನನ್ನ ಹೆಸರು 'ಹಾಲುಭೂತ' ನನ್ನ ಪಕ್ಕದಲ್ಲಿರುವವನ ಹೆಸರು 'ರಕ್ತಭೂತ'. ನಾವಿಬ್ಬರೂ ಅಣ್ಣ-ತಮ್ಮಂದಿರು. ನಾವು ಎಲ್ಲಿ ಹುಟ್ಟಿದೆವು ಎಂಬುದು ನಮಗೆ ಗೊತ್ತಿಲ್ಲ. ನಾವು ಎಲ್ಲಿಂದ ಬಂದಿದ್ದೇವೆ ಎಂಬುದು ಸಹ ನಮಗೆ ಗೊತ್ತಿಲ್ಲ. ನಮಗೆ ಬಂಧು-ಬಳಗ ಯಾರೂ ಇಲ್ಲ. ನಮಗೆ ನೀವೇ ಬಂಧುಗಳು, ಆಶ್ರಯಧಾತರು.

ನಿಮಗೆ ಮಾರ್ಗದರ್ಶನ ನೀಡುತ್ತಾ ನಿಮ್ಮಿಂದ ಮಹತ್ತರವಾದ ಕಾರ್ಯಮಾಡಿಸಲು ಇಲ್ಲಿಗೆ ಬಂದಿದ್ದೇವೆ. ನಿಮ್ಮೂರಿನಲ್ಲಿ ಆಂಜನೇಯನ ಮೂರ್ತಿ ಸ್ಥಾಪಿಸಲು ನಮಗೆ ದೈವ ಪ್ರೇರಣೆಯಾಗಿದೆ. ಇದರಿಂದ ನಿಮ್ಮೂರಿಗೆ ಒಳ್ಳೆಯದಾಗಿ ನಿಮ್ಮೂರು ಪ್ರಸಿದ್ಧಿಯನ್ನು ಪಡೆಯುತ್ತದೆ" ಎಂದನು. ಈ ಮಹಾನ್ ಬಾಲಕರ ವಾಣಿಯನ್ನು ಇಡೀ ಗ್ರಾಮವೇ ಒಪ್ಪಿ ಆ ಬಾಲಕರಿಗೆ ಆಂಜನೇಯನನ್ನು ಸ್ಥಾಪಿಸಲು ಒಪ್ಪಿಗೆ ಕೊಟ್ಟರು.

ಮರುದಿನ ಬೆಳಿಗ್ಗೆ ಇಡೀ ಗ್ರಾಮವೇ ಶೃಂಗಾರಗೊಂಡಿತು. ಬೀದಿಗಳನ್ನೆಲ್ಲ ಸ್ವಚ್ಛಗೊಳಿಸಿ ತಳಿರು ತೋರಣಗಳಿಂದ ಅಲಂಕೃತಗೊಳಿಸಿದರು. ಮತ್ತೆ ಊರಿನ ದೈವಸ್ಥರೆಲ್ಲಾ ಸಭೆ ಸೇರಿದರು. ಆಂಜನೇಯನ ಮೂರ್ತಿಯನ್ನು ಈ ಬಾಲಕರು ಎಲ್ಲಿಂದ ತರುತ್ತಾರೋ? ಎಂಬ ಕುತೂಹಲ ಎಲ್ಲರಲ್ಲಿಯೂ ಇತ್ತು. ಆಗ ಬಾಲಕರಲ್ಲೊಬ್ಬನು ಜನರನ್ನು ಕುರಿತು "ನಿಮ್ಮೂರಿನ ಹಳ್ಳದ ತಿರುವಿನ ಮಡುವಿನಲ್ಲಿ ಮುಳುಗಿ ಮೂರು ದಿನಗಳ ನಂತರ ಆಂಜನೇಯನ ಮೂರ್ತಿಯನ್ನು ಹೊತ್ತು ತರುತ್ತೇವೆ. ಅದನ್ನು ಒಂದು ಬಂಡಿಯಲ್ಲಿ ತೆಗೆದುಕೊಂಡು ಹೋಗಿರಿ. ಬಂಡಿಯ ಅಚ್ಚು ಎಲ್ಲಿ ಮುರಿದು ಬೀಳುತ್ತದೆಯೋ ಅಲ್ಲಿಯೇ ಆಂಜನೇಯನ ಮೂರ್ತಿಯನ್ನು ಸ್ಥಾಪನೆ ಮಾಡಿರಿ" ಎಂದನು. ಬಾಲಕರು ಹೇಳಿದಂತೆ ಊರಿನ ದೈವಸ್ಥರು ವಾದ್ಯಗಳ ಸಮೇತ ಬಂಡಿಯೊಂದಿಗೆ ಹಳ್ಳದ ತಿರುವಿನ ಮಡುವಿನ ಹತ್ತಿರ ಹೋದರು. ಬಾಲಕರಿಬ್ಬರೂ ದೈವಕ್ಕೆ ನಮಸ್ಕರಿಸಿ ಹಳ್ಳದ ಗುಂಡಿಯಲ್ಲಿ ಮುಳುಗಿದರು. ಎರಡು ದಿನ ಆದರೂ ಬಾಲಕರು ಮೇಲೆ ಬರಲೇ ಇಲ್ಲ. ಜನರಿಗೆ ಚಿಂತೆ ಆಯಿತು. ಅದರ ಆಳ ಎಷ್ಟಿತ್ತೆಂದರೆ ಏಳು ವರಸಿನ ನೂಲಿ (ಹಗ್ಗ) ಯನ್ನು ಬಿಟ್ಟರೂ ಅದರ ತಳ ಸಿಗುತ್ತಿರಲಿಲ್ಲವಂತೆ. ಮೂರು ದಿನಗಳ ನಂತರ ನೀರಿನ ಮೇಲೆ ಗುಳ್ಳೆಗಳು ಬರಲು ಪ್ರಾರಂಭವಾದವು. ಹಾಗೆಯೇ ಗುಳ್ಳೆಗಳು ದೊಡ್ಡ ಆಕಾರ ತಾಳುತ್ತಿರುವುದನ್ನು ನೋಡಿ ಬಾಲಕರು ಮೇಲೆ ಬರಬಹುದೆಂದು ಊಹಿಸಿದರು.

ಎಲ್ಲರೂ ಬೆರಗಾಗಿ ನೋಡುತ್ತಿದ್ದಂತೆಯೇ ಆ ಪುಟ್ಟ ಬಾಲಕರು ಹನುಮನ ಶಿಲಾಮೂರ್ತಿಯನ್ನು ಹೊತ್ತುಕೊಂಡು ತಿರುವಿನ ಮಡುವಿನಿಂದ ಮೇಲಕ್ಕೆ ಎದ್ದು ಬಂದರು. ಜನರು ಸಂತೋಷದಿಂದ ಕುಣಿದಾಡಿದರು. ಆ ಮೂರ್ತಿಯನ್ನು ದಂಡೆಯ ಮೇಲಿಟ್ಟು ಪೂಜೆ ಮಾಡಿದ ನಂತರ ತಾವು ತಂದ ಬಂಡಿಯಲ್ಲಿ ಹೇರಿಕೊಂಡು ಊರಿನ ಕಡೆ ಪ್ರಯಾಣ ಬೆಳೆಸಿದರು. ಆದರೆ ಮೂರ್ತಿಯನ್ನು ಹೊತ್ತ ಬಂಡಿಯ ಅಚ್ಚು ಈಗಿರುವ ದೇವಸ್ಥಾನದ ಜಾಗದಲ್ಲಿ ಮುರಿದು ಬಿದ್ದಿತು. ಬಾಲಕರು ಹೇಳಿದಂತೆ ಮೂರ್ತಿಯನ್ನು ಅಲ್ಲಿಯೇ ಇಳಿಸಿ ದಕ್ಷಿಣ ದಿಕ್ಕಿಗೆ ಮುಖ ಮಾಡಿ ನಿಲ್ಲಿಸಿದರು. ಆದರೆ ಆಂಜನೇಯನ ನಿತ್ಯ ಪೂಜೆ ಮಾಡಲು ಯಾರೂ ಮುಂದೆ ಬರಲಿಲ್ಲ. ಕೊನೆಗೆ ಊರಿನ ದೈವಸ್ಥರ ತೀರ್ಮಾನದಂತೆ ಆಂಜನೇಯನ ಮೂರ್ತಿ ಹೊತ್ತು ತಂದ ಬಾಲಕರೆ ಪೂಜೆ ಮಾಡಲು ನಿರ್ಧರಿಸಲಾಯಿತು. ಆ ಬಾಲಕರು ಸಹ ಅದಕ್ಕೆ ಒಪ್ಪಿದರು. ಅವರು ಕಟ್ಟಿಕೊಂಡಿದ್ದ ಹಲಗೆಗಳನ್ನು ಒಂದು ಮರಕ್ಕೆ ನೇತು ಹಾಕಿದರು. ಮೂರ್ತಿ ಸ್ಥಾಪಿಸಿದ ಜಾಗದಲ್ಲಿ ಮೊದಲು ಊರು ಇರಲಿಲ್ಲ. ಆ ಪ್ರದೇಶ ಗಿಡ-ಮರಗಳಿಂದ ಆವೃತವಾಗಿತ್ತು. ಮೂರ್ತಿ ಸ್ಥಾಪಿಸಿದ ನಂತರ ಊರನ್ನು ಇಲ್ಲಿಗೆ ಸ್ಥಳಾಂತರಿಸಿದರು. ಆ ಬಾಲಕರಿಬ್ಬರು

ಆಂಜನೇಯನ ಪೂಜೆ ಮಾಡಲು ಖಾಯಂ ಆಗಿ ನೇಮಕವಾದ್ದರಿಂದ ಆ ಬಾಲಕರಿಗೆ ಅದೇ ಊರಿನಲ್ಲಿ ಕನ್ಯೆಗಳನ್ನು ತೆಗೆದು ಲಗ್ನ ಮಾಡಿದರು. ಹೀಗೆ ಆಂಜನೇಯನ ನಿತ್ಯ ಪೂಜೆ ಆ ಬಾಲಕರಿಂದಲೇ ಪ್ರಾರಂಭವಾದುದರಿಂದ ಅವರಿಗೆ ಪೂಜಾರು ಮನೆತನದವರು ಎಂದು ಕರೆದರು. ಈಗ ಊರಿನಲ್ಲಿ ಆಂಜನೇಯನ ಪೂಜೆ ಮಾಡುತ್ತಿರುವ ಪೂಜಾರುವಂಶ ಆ ಬಾಲಕರಿಂದಲೇ ಬೆಳೆದು ಬಂದಿದೆ.

ಈಗಲೂ ಸಹ ಪೂಜಾರು ಮನೆತನದವರ ಮೊದಲ ಮಗನ ಮದುವೆ ಸಂದರ್ಭದಲ್ಲಿ 'ರಕ್ತಭೂತ' ಮತ್ತು 'ಹಾಲುಭೂತ' ಹಲಗೆಗಳನ್ನು ಉತ್ಸವದಿಂದ ಈ ಮಾರುತಿ ಸಿಕ್ಕ ಮಡುವಿನ ಹತ್ತಿರ ಹೊರಡಿಸುತ್ತಾರೆ. ಆಗ ಅವರ ಪೈಕಿ ಇಬ್ಬರು ಹಿರಿಯರು ಸ್ನಾನಮಾಡಿ ಹೊಸ ಬಟ್ಟೆಯನ್ನು ತೊಟ್ಟು ಆ ಹಲಗೆಗಳಿಗೂ ಸ್ನಾನ ಮಾಡಿಸುತ್ತಾರೆ. ರಕ್ತಭೂತ ಎಂಬ ಹೆಸರಿನ ಹಲಗೆಯನ್ನು ಕೊರಳಲ್ಲಿ ಕಟ್ಟಿಕೊಂಡ ಮನುಷ್ಯ ತನ್ನ ಕೈಯನ್ನು ಕಡಕೊಂಡು ಆ ಹಲಗೆಯ ಮೇಲೆ ರಕ್ತ ಸುರಿಸುತ್ತಾನೆ. ಹಾಲುಭೂತ ಎಂಬ ಹೆಸರಿನ ಹಲಗೆಯನ್ನು ಕೊರಳಲ್ಲಿ ಕಟ್ಟಿಕೊಂಡ ಮನುಷ್ಯನ ಹಲಗೆಯ ಮೇಲೆ ಹಾಲನ್ನು ಹಾಕಿದ ನಂತರ ಅದನ್ನು ಕೊರಳಲ್ಲಿ ಕಟ್ಟಿಕೊಳ್ಳುತ್ತಾನೆ. ಆ ಎರಡು ಹಲಗೆಗಳಿಗೂ ಹೊಸ ಬಟ್ಟೆಯನ್ನು ಹೊದಿಸಿರುತ್ತಾರೆ. ನಂತರ ಅವರಿಬ್ಬರನ್ನು ವಾದ್ಯಗಳ ಸಮೇತ ಮೆರವಣಿಗೆಯಲ್ಲಿ ಊರಿನೊಳಗೆ ಕರೆದುಕೊಂಡು ಬರುತ್ತಾರೆ. ಆ ಹಲಗೆಗಳನ್ನು ಕಟ್ಟಿಕೊಂಡು ಇಬ್ಬರ ಮೇಲೆ ದೇವರ ಆವೇಶವಾಗಿ ಅವರನ್ನು ಹಿಡಿಯುವುದೇ ಕಷ್ಟವಾಗುತ್ತದೆ. ಈ ಪದ್ಧತಿ ಪುರಾತನ ಕಾಲದಿಂದ ಇಂದಿಗೂ ನಡೆದುಕೊಂಡು ಬಂದಿದೆ.

ಈ ಹಲಗೆಗಳು ಆಂಜನೇಯನ ಪೂಜಾರು ವಂಶಜರ ಹಿರಿಯರ ಮನೆತನದಲ್ಲಿ ಇಂದಿಗೂ ಇವೆ. ಅವು ಅವರ ಮನೆತನದ ಇತರ ದೇವರುಗಳೊಡನೆ ಪೂಜೆಗೊಳ್ಳುತ್ತವೆ.

### ೩.೪. ದೇವಸ್ಥಾನ ಸ್ಥಾಪನೆ

ರಕ್ತಭೂತ ಮತ್ತು ಹಾಲುಭೂತ ಹಲಗೆಗಳನ್ನು ಧರಿಸಿದ ಬಾಲಕರು ಆಂಜನೇಯನ ಮೂರ್ತಿಯನ್ನು ತಂದು ಈಗಿರುವ ಜಾಗದಲ್ಲಿ ದಕ್ಷಿಣಾಭಿಮುಖವಾಗಿ ನಿಲ್ಲಿಸಿದಾಗ ಬಹಳ ಕಾಲದವರಿಗೆ ಅಲ್ಲಿ ಯಾವುದೇ ದೇವಸ್ಥಾನ ನಿರ್ಮಾಣ ಆಗಿರಲಿಲ್ಲ. ಬರೀ ಮೂರ್ತಿ ಮಾತ್ರ ಇತ್ತು. ಮೂರ್ತಿಯನ್ನು ದಿನನಿತ್ಯ ಆ ಬಾಲಕರು ಮತ್ತು ಊರಿನ ಜನರು ಪೂಜೆ ಮಾಡುತ್ತಿದ್ದರು.

ಈ ರೀತಿ ಈ ಊರಿಗೆ ಮಾರುತಿ ಬಂದು ನೆಲೆಸಿದ ಎಷ್ಟೋ ಕಾಲದ ಮೇಲೆ ವಿಯನಗರದ ಶ್ರೀ ವ್ಯಾಸರಾಯರು (ಸಂಸ್ಕೃತ ವಿದ್ವಾಂಸರು) ೧೫ನೇ ಶತಮಾನದ ಉತ್ತರಾರ್ಧದಲ್ಲಿ ಸಂಚಾರತ್ವೇನ ಈ ಊರಿಗೆ ಬಂದಾಗ ಈ ಮಾರುತಿ ವಿಗ್ರಹವನ್ನು ನೋಡಿ ಇದಕ್ಕೆ ಸರಿಯಾದ ಒಂದು ಗುಡಿಯನ್ನು ಕಟ್ಟಿಸಿ ವಿಧಿ ಪೂರ್ವಕ ಪ್ರತಿಷ್ಠಾಪನೆ ಮಾಡಬೇಕೆಂದು ಅವರ ಮನಸ್ಸಿನಲ್ಲಿ ಹುಟ್ಟಿತು. ನಂತರ ತಮ್ಮ ಇಚ್ಛೆಯನ್ನು ಆ ಊರಿನ ಜನರಿಗೆ ಕರೆಸಿ ಹೇಳಲಾಗಿ, ಊರಿನ ಜನರು ಅದಕ್ಕೆ ಸಂತೋಷದಿಂದ ಒಪ್ಪಿ ಕೂಡಲೇ ಏರ್ಪಾಡು ಮಾಡಿ ಒಂದು ಶಾಶ್ವತವಾದ ಗುಡಿಯನ್ನು ಕಟ್ಟಿ ಶ್ರೀ ವ್ಯಾಸರಾಯರಿಂದಲೇ ಅದರ

ಪ್ರತಿಷ್ಠಾಪನೆಯನ್ನು ಮಾಡಿಸಿದರು. ಮುಂದೆ ಊರು ಬೆಳೆಯುತ್ತಾ ಹೋಗಿ ಅಲ್ಲಿ ಜನವಸತಿ ಹೆಚ್ಚಾಗಿ ಊರು ಅಭಿವೃದ್ಧಿಯನ್ನು ಹೊಂದಿತು.

**ರಾಘವೇಂದ್ರ ಮಠದ ನಿರ್ಮಾಣ :** (ಮೊದಲಹಂತ) ಕಡಲಬಾಳು ಗ್ರಾಮದ ರಾಘವೇಂದ್ರ ಮಠದ ರಾಯರ ಆರಾಧಕರಾದ ಎರಡನೇ ವಿಠಲಾಚಾರ್ಯರು ರಾಯರನ್ನು ಕೂಡಿಸಿದ ಹಳೆಯ ಮನೆಯನ್ನು ಬಿಚ್ಚಿಸಿ ಶಿಲಾಮಯ ಮಠವನ್ನು ಕಟ್ಟಿಸಲು ಪ್ರಯತ್ನ ಮಾಡಿದರು. ಕಾರಣ ಆರಾಧನೆಗೆ ಬರುವ ಜನ ಹೆಚ್ಚುತ್ತಾ ಹೋಯಿತು ಆದರೆ ಅವರ ಪ್ರಯತ್ನ ಫಲಿಸಲಿಲ್ಲ. ಕ್ರಿ.ಶ. ೧೯೧೧ ಆಗಸ್ಟ್ ತಿಂಗಳ ೧೧,೧೨,೧೩ನೇ ದಿನಗಳಲ್ಲಿ ಆರಾಧನೆಗೆ ಬಂದ ಭಕ್ತಮಂಡಲಿಯಲ್ಲಿ

೧. ಹಡಗಲಿ ತಾಲೂಕು ತಹಶೀಲ್ದಾರರಾದ ಕೂಡ್ಲಿಗಿ ನಾಗೇಶ್ ಶಾಸ್ತ್ರಿಗಳು

೨. ಬೆಣಕಲ್ ಗ್ರಾಮದ ದೇಸಾಯಿಗಳಾದ ಪಾಂಡಪ್ಪನವರು

೩. ಗದುಗಿನಲ್ಲಿ ವಕೀಲ ವೃತ್ತಿ ಮಾಡುತ್ತಿದ್ದ ಈ ದೇಸಾಯಿಯವರ ತಮ್ಮಂದಿರಾದ ಸುಬ್ಬರಾಯರು

೪. ಧಣಾಯಕನ ಕೆರೆ ಗ್ರಾಮದ ಜೋಯಿಸ ಭೀಮಪ್ಪನವರು

೫. ವಿಠಲಾಚಾರ್ಯರ ಸೋದರ ಮಾವಂದಿರಾದ ಗುರುರಾಜಾಚಾರ್ಯರು ಹಾಗೂ ಹನುಮಂತಚಾರ್ಯರು ಇವರುಗಳು ರಾಯರ ಶಿಲಾಮಯ ಮಠವನ್ನು ಕಟ್ಟುವುದಕ್ಕೆ ವಿಠಲಾಚಾರ್ಯರಿಗೆ ಪ್ರೋತ್ಸಾಹ ಹಾಗೂ ಧೈರ್ಯವನ್ನು ಕೊಟ್ಟರು. ಇವರೆಲ್ಲರೂ ರಾಯರ ಆರಾಧನೆಯಲ್ಲಿ ರಥೋತ್ಸವದ ದಿನ ಒಂದು ಚಂದಾ ಪಟ್ಟಿಯನ್ನು ತಯಾರು ಮಾಡಿದರು. ಆರಾಧನೆಗೆ ಬಂದವರೆಲ್ಲ ಚಂದಾ ಕೊಡಲು ವಾಗ್ದಾನ ಮಾಡಿದರು. ತಹಶೀಲ್ದಾರರಾದ ನಾಗೇಶ್ ಶಾಸ್ತ್ರಿಗಳೇ ರೂ. ೧೫೦ ಚಂದಾ ಬರೆದು ಉಳಿದವರಿಗೆಲ್ಲಾ ಮಾರ್ಗದರ್ಶನ ಮಾಡಿದರು. ಹೀಗೆ ಆರಾಧನೆಯಲ್ಲಿ ಆರಂಭವಾದ ಚಂದಾ ಪಟ್ಟಿ ಮುಂದಿನ ಆರಾಧನೆ ಬರುವ ಹೊತ್ತಿಗೆ ಬೇರೆ ಬೇರೆ ಗ್ರಾಮವಾಸಿಗಳಿಂದ ಕೂಡ ವಾಗ್ದಾನ ಸಿಕ್ಕಿ ಸುಮಾರು ರೂ. ೨೨೦೦ರ ಮೇಲ್ಪಟ್ಟು ಹಣ ಸಿಗುವ ಭರವಸೆ ಬಂತು. ಎರಡನೇ ವಿಠಲಾಚಾರ್ಯರು ೨೦.೧೦.೧೯೧೨ರ ವಿಜಯದಶಮಿ ದಿನ ಆಗಿನ ಕಾಲದಲ್ಲಿ ಹೊಸಪೇಟೆಯಲ್ಲಿ ಪ್ರಸಿದ್ಧ ವಕೀಲರಾದ ಕೃಷ್ಣಾಚಾರ್ಯರ ಹಸ್ತದಿಂದ ಶ್ರೀ ಗುರುರಾಜರ ನೂತನ ಶಿಲಾಮಯ ಮಂಟಪಕ್ಕೆ ಅಸ್ತಿ ಭಾರವನ್ನು ಹಾಕಿಸಿದರು.

ಕಡಲಬಾಳು ಗ್ರಾಮದಲ್ಲಿದ್ದ ಕೊಪ್ಪಳದ ಸ್ವಾಮಿಗಳು (ಗದ್ದದಜ್ಜ) ಊರಿನ ಜನರಿಗೆ ಮಠ ಕಟ್ಟಿಸಲು ತನು, ಮನ, ಧನಗಳಿಂದ ಸಹಾಯ ಮಾಡಲು ಹೇಳಿದರು. ಊರಿನ ಜನರ ಸಹಾಯ, ಸಹಕಾರ ಒದಗಿಸುವುದಾಗಿ ಆಶ್ವಾಸನೆ ದೊರೆತಿದ್ದರಿಂದ ವಿಠಲಾಚಾರ್ಯರಿಗೆ ಹೆಚ್ಚಿನ ಧೈರ್ಯವು ಬಂದು ಮಠ ಕಟ್ಟುವ ಕಾರ್ಯವನ್ನು ಆರಂಭ ಮಾಡಿದರು. ಊರಿನ ಎಲ್ಲಾ ಜನಾಂಗದವರು ಮಠ ಕಟ್ಟುವ ಕಾರ್ಯದಲ್ಲಿ ನೆರವಾದರು. ಆಚಾರ್ಯರು ಹೇಳಿ ಕಳಿಸಿದಾಗಲೆಲ್ಲ ಊರಿನ ಜನ ಬಂದು ಮಠ

ಮುಗಿಯುವವರೆಗೂ ಎಲ್ಲಾ ಕೆಲಸಗಳನ್ನು ಸ್ವಸಂತೋಷದಿಂದ ಉಚಿತವಾಗಿ ಮಾಡಿಕೊಟ್ಟರು. ಮಠದ ಇಡೀ ಕಟ್ಟಡ ೭-೮ ತಿಂಗಳಲ್ಲಿ ಸಿದ್ಧವಾಯಿತು. ೧೪.೮.೧೯೧೩ರಂದು ರಾಯರ ವೃಂದಾವನವನ್ನು ಈ ನೂತನ ಶಿಲಾಮಯ ಮಠದಲ್ಲಿ ವಿಠಲಾಚಾರ್ಯರು ಪುನಃ ಕರೆದುಕೊಂಡು ಹೋಗಿ ಕೂಡಿಸಿದರು.[೬]

**ಆಂಜನೇಯ ದೇವಸ್ಥಾನದ ನಿರ್ಮಾಣ :** (ಎರಡನೇ ಹಂತ) ಮಠದ ಕಾರ್ಯ ಮುಗಿದ ಮೇಲೆ ವಿಠಲಾಚಾರ್ಯರು ಕಡಲಬಾಳು ಗ್ರಾಮದ ಉಳಿದ ಗುಡಿ-ಗುಂಡಾರಗಳ ಜೀರ್ಣೋದ್ಧಾರ ಕಾರ್ಯವನ್ನು ಕೈಕೊಂಡರು. ಮೊಟ್ಟ ಮೊದಲಿಗೆ ಆಂಜನೇಯನ ಹಳೆಯ ಗುಡಿಯನ್ನು ಬಿಚ್ಚಿಸಿ ಶಿಲಾಮಯ ಗರ್ಭಗುಡಿಯನ್ನು ಅದರ ಮುಂದೆ ಒಂದು ಭವ್ಯವಾದ ಸಭಾಂಗಣವನ್ನು ಕಟ್ಟಿಸಲು ಏರ್ಪಾಟು ಮಾಡಿಸಿದರು. ತಮ್ಮ ಇಚ್ಛೆಯನ್ನು ಆಗಿನ ಗವಿಮಠದ ೧೫ನೇ ಪೀಠಸ್ಥರಾದ ಶಿವಶಾಂತ ವೀರ ಮಹಾಸ್ವಾಮಿಗಳ (ಗಡ್ಡದಜ್ಜ) ಗಮನಕ್ಕೆ ತಂದರು. ಸ್ವಾಮಿಗಳು ಇದಕ್ಕೆ ಸಹಮತ ಸೂಚಿಸಿದರು. ಸ್ವಾಮಿಗಳಿಗೆ ಊರಿನಲ್ಲಿ ಎಲ್ಲಾ ಜನಾಂಗದ ಶಿಷ್ಯರು ಇದ್ದರು. ಸ್ವಾಮಿಗಳು ತಮ್ಮ ಶಿಷ್ಯಂದಿರಿಗೆ ದೇವಸ್ಥಾನ ಕಟ್ಟಿಸಲು ತನು, ಮನ, ಧನಗಳಿಂದ ಸಹಾಯ ಮಾಡಲು ತಿಳಿಸಿದರು. ಆಮೇಲೆ ಆಚಾರ್ಯರಿಗೂ "ಆಚಾರ್ಯರೇ ನಿಮಗೆ ಯಾವ ಸಹಾಯ ಬೇಕಾದರೂ ನಮಗೆ ಹೇಳಿ ಕಳಿಸಿರಿ. ಕೂಡಲೇ ನಾವು ಜನರ ಸಹಾಯ ಒದಗಿಸುವೆವು. ನೀವು ಕೈಕೊಂಡಿರುವುದು ಒಂದು ದೊಡ್ಡ ಕೆಲಸ. ಅದಕ್ಕಾಗಿ ಊರಿನವರ ಪೂರ್ಣ ಸಹಕಾರ ನಿಮಗೆ ದೊರೆಯುವಂತೆ ನಾವು ಮಾಡುತ್ತೇವೆ. ನೀವು ತೀರ ನಿರ್ವಾಹವಿಲ್ಲದ ಕೆಲಸಗಳಿಗೆ ಮಾತ್ರ ಕೂಲಿ ಆಳುಗಳನ್ನು ನೇಮಿಸಿಕೊಳ್ಳಿರಿ. ಉಳಿದೆಲ್ಲ ದೊಡ್ಡ ಕೆಲಸಗಳಿಗೆ ಜನರಿಂದ ಉಚಿತ ಸೇವೆ ನಾವು ಮಾಡಿಸುತ್ತೇವೆ" ಎಂಬ ಆಶ್ವಾಸನೆ ನೀಡಿದರು. ಈ ರೀತಿ ಕೊಪ್ಪಳ ಸ್ವಾಮಿಗಳಿಂದ ಆಶ್ವಾಸನೆ ದೊರೆತಿದ್ದರಿಂದ ವಿಠಲಾಚಾರ್ಯರಿಗೆ ಹೆಚ್ಚಿನ ಧೈರ್ಯವು ಬಂದು ದೇವಸ್ಥಾನ ಕಟ್ಟಿಸುವ ಕೆಲಸವನ್ನು ಆರಂಭಮಾಡಿದರು.

ಮೊದಲಿಗೆ ದೇವಸ್ಥಾನ ನಿರ್ಮಾಣಕ್ಕಾಗಿ ಹಣ ಸಂಗ್ರಹಣೆ ಕಾರ್ಯ ನಡೆಯಿತು. ಇದನ್ನು ಚಂದಾ ಪಟ್ಟಿಯ ಮೂಲಕ ಸಂಗ್ರಹಿಸಲಾಯಿತು. ಊರಿನ ಎಲ್ಲಾ ಜನಾಂಗದವರು ತಮ್ಮ ಕೈಲಾದಷ್ಟು ಪಟ್ಟಿಯ ಮೂಲಕ ಹಣ ನೀಡಿದರು. ಆದರೂ ಹಣ ಸಂಗ್ರಹಣೆ ದೇವಸ್ಥಾನ ನಿರ್ಮಾಣಕ್ಕೆ ಸಾಕಾಗಲಿಲ್ಲ. ನಂತರ ವಿಠಲಾಚಾರ್ಯರು ಊರಿನ ಕೆಲವು ಪ್ರಮುಖ ಮುಖಂಡರೊಂದಿಗೆ ಬೇರೆ ಬೇರೆ ಹಳ್ಳಿ ಮತ್ತು ತಾಲೂಕು ಸ್ಥಳಗಳಿಗೆ ಭೇಟಿಕೊಟ್ಟು ಪಟ್ಟಿಯ ಮುಖಾಂತರ ಹಣ ಸಂಗ್ರಹಿಸಿದರು. ಹಣ ಸಂಗ್ರಹಣೆ ಕೆಲಸ ಬಹಳ ಬಹಳ ದಿನಗಳವರೆಗೆ ನಡೆಯಿತು. ಯಾವುದೇ ಕಡೆ ಹೋದರೂ ಬರಿಗೈಯಲ್ಲಿ ಅವರು ವಾಪಾಸು ಬರಲಿಲ್ಲ. ಇದರಿಂದ ಅವರಿಗೆ ದೇವಸ್ಥಾನ ಕಟ್ಟಿಸಲು ಇನ್ನೂ ಹೆಚ್ಚಿನ ಧೈರ್ಯ ಬಂದಿತು.

ಕ್ರಿ.ಶ. ೧೯೧೪ರಲ್ಲಿ ಬಳ್ಳಾರಿಯಿಂದ ನುರಿತ ಕಲ್ಲುಕುಟಿಗರಾದ ಸಿದ್ದಪ್ಪ ಮತ್ತು ಈತನ ತಮ್ಮ ಹಾವಪ್ಪರನ್ನು ಕರೆಸಿ ಅವರಿಗೆ ಕಡಲಬಾಳು ಸಮೀಪದಲ್ಲಿದ್ದ ಗೌಡನಬಂಡೆ ಗುಡ್ಡದಿಂದ ಮತ್ತು ಆನೇಕಲ್ಲಿನ ಹಿರೇಆಕಳತಿಪ್ಪಿ ಬಂಡೆಯಿಂದ, ಹೆಗ್ನಾಳ ಹತ್ತಿರದ ಬಂಡೆಯಿಂದ ದೇವಸ್ಥಾನ ಕಟ್ಟಲು ಬೇಕಾದ ಕಲ್ಲು, ಬಂಡೆ, ತೊಲಿ, ಕಂಬ ಮುಂತಾದವುಗಳನ್ನು ಎಬ್ಬಿಸಲು ಗುತ್ತಿಗೆ ಕೊಟ್ಟರು. ಸಾಕಷ್ಟು

ಕಲ್ಲುಗಳು ಸಂಗ್ರಹವಾದ ಕೂಡಲೇ ಅವುಗಳನ್ನು ದೇವಸ್ಥಾನಕ್ಕೆ ಹೇರಿಸಿ ಕಟ್ಟಡದ ನಿರ್ಮಾಣ ಕಾರ್ಯ ಆರಂಭಮಾಡಿದರು. ಬುನಾದಿ ಕಟ್ಟುವುದು ಮುಗಿದು ಗೋಡೆ ಸ್ವಲ್ಪ ಎತ್ತರ ಎದ್ದ ಕೂಡಲೇ ದೊಡ್ಡ ದೊಡ್ಡ ಕಂಬ, ತೊಲಿಗಳನ್ನು ಹೇರಲು ಜನರ ಸಹಾಯವು ಬೇಕಾಯಿತು. ಆಗ ತಮಗೆ ಶಿಷ್ಯರಂತಿದ್ದ ನಾಯಕರಿಗೂ ಹಾಗೂ ಮುಸಲ್ಮಾನರಿಗೂ ಹೇಳಿ ಕಳಿಸಿದರು. ಕೊಪ್ಪಳ ಸ್ವಾಮಿಗಳು ಸಹ ತಮ್ಮ ಶಿಷ್ಯರಾದ ವೀರಶೈವರಿಗೂ, ಕುರುಬರಿಗೂ ಈ ಕಾರ್ಯಕ್ಕೆ ನೆರವಾಗುವಂತೆ ಆಜ್ಞಾಪಿಸಿದರು. ಹೀಗಾಗಿ ಗುಡ್ಡದ ಹತ್ತಿರ ತಯಾರಾದ ದೊಡ್ಡ ದೊಡ್ಡ ಶಿಲಾಕಂಭ,ತೊಲೆಗಳು, ಹರೆಗಳನ್ನು, ಊರಿನ ಎಲ್ಲಾ ಮತದ ಜನರ ಹಿಂಡೇ ಬಂದು ಬಂಡಿಗಳಲ್ಲಿ ಹೇರಿ ದೇವಸ್ಥಾನದ ಜಾಗದಲ್ಲಿ ಇಳಿಸಿಕೊಟ್ಟರು. ಆಮೇಲೆ ಕೂಡ ಕಂಬಗಳನ್ನು ನಿಲ್ಲಿಸಲಿಕ್ಕೂ ಅವುಗಳ ಮೇಲೆ ತೊಲಿಗಳನ್ನು ಹೇರಲಿಕ್ಕೂ ಊರಿನ ಜನರು ಬಂದು ದೇವಸ್ಥಾನದ ಕೆಲಸ ಮುಗಿಯುವವರೆಗೂ ಎಲ್ಲಾ ಕೆಲಸಗಳನ್ನು ಸ್ವಸಂತೋಷದಿಂದ ಉಚಿತವಾಗಿ ಮಾಡಿಕೊಟ್ಟರು. ಇಡೀ ದೇವಸ್ಥಾನದ ಕೆಲಸ ಒಂದು ವರ್ಷದ ಅವಧಿಯಲ್ಲಿ ಪೂರ್ಣಗೊಂಡಿತು. ದೇವಸ್ಥಾನ ನಿರ್ಮಾಣದಲ್ಲಿ ಊರಿನ ಪ್ರತಿಯೊಂದು ಮನೆಯವರು ಬಂದು ತಮ್ಮ ಸೇವೆಯನ್ನು ಸಲ್ಲಿಸಿದ್ದಾರೆ.

ಆಂಜನೇಯನ ಮೂರ್ತಿ ಒಂದಾಳಕ್ಕಿಂತಲೂ ಎತ್ತರವಾದ ಭವ್ಯವಾದ ಮೂರ್ತಿ ಆಗಿದ್ದು ಆ ಮೂರ್ತಿಗೆ ತಕ್ಕುದಾದ ದೊಡ್ಡ ಗರ್ಭಗುಡಿಯನ್ನು ಮೇಲೆ ಭವ್ಯ ಗೋಪುರವನ್ನು ಗುಡಿಗೆ ಒಪ್ಪುವ ವಿಶಾಲವಾದ ಸಭಾಮಂಟಪವನ್ನು ಒಳ್ಳೆ ಎತ್ತರದಲ್ಲಿ ಕಟ್ಟಿಸಿದರು. ಅದಲ್ಲದೆ ಆ ಗುಡಿಯ ಪ್ರಾಕಾರದಲ್ಲಿ ಬಲಬದಿಯ ಮೂಲೆಯಲ್ಲಿ ಒಂದು ಸಣ್ಣ ಛತ್ರವನ್ನು ಕಟ್ಟಿಸಿದರು.[೬] ನಂತರ ಊರಿನ ಇತರ ದೇವಸ್ಥಾನಗಳಾದ ಊರಮ್ಮ, ಕಲ್ಲೇಶ್ವರ, ಮಸೂದೆಗಳನ್ನು ಕಟ್ಟಿಸಲು ಏರ್ಪಾಡು ಮಾಡಿದರು.

ಹೀಗೆ ಆಂಜನೇಯ ದೇವಸ್ಥಾನದ ನಿರ್ಮಾಣವು ರಾಘವೇಂದ್ರ ಮಠದ ರಾಯರ ಆರಾಧಕರಾದ ಎರಡನೇ ವಿಠಲಾಚಾರ್ಯರು ಮತ್ತು ಆಗಿನ ಗವಿಮಠದ ೧೫ನೇ ಪೀಠಸ್ಥರಾದ ಶಿವಶಾಂತವೀರ ಮಹಾಸ್ವಾಮಿಗಳ (ಗಡ್ಡದಜ್ಜ) ಮುಖಂಡತ್ವದಲ್ಲಿ . ಊರಿನ ಎಲ್ಲಾ ಮತದ ಜನರ ಸಹಾಯ ಸಹಕಾರದೊಂದಿಗೆ ಕ್ರಿ.ಶ. ೧೯೧೪ರಲ್ಲಿ ನಿರ್ಮಾಣವಾಯಿತು.

**ದ್ವಾರಮಂಟಪದ ನಿರ್ಮಾಣ :** ೧.೧.೧೯೯೬ರಲ್ಲಿ ದ್ವಾರಮಂಟಪದ ಬುನಾದಿ ಹಾಕಿ ೧೯೯೯ರಲ್ಲಿ ಕೆಲಸವನ್ನು ಪೂರ್ಣಗೊಳಿಸಿದ್ದಾರೆ. ದ್ವಾರಮಂಟಪಕ್ಕೆ ಭಕ್ತರ ಸಹಾಯದಿಂದ ಸುಮಾರು ಒಂದು ಲಕ್ಷ ರೂಪಾಯಿ ಹಣವನ್ನು ಸಂಗ್ರಹಿಸಲಾಗಿದೆ. ಗುತ್ತಿಗೆದಾರರು ಸುಮಾರು ನೂರು ಚೀಲ ಸಿಮೆಂಟನ್ನು ದಾನವಾಗಿ ಕೊಟ್ಟಿದ್ದಾರೆ. ಊರಿನ ಎಲ್ಲಾ ಜನಾಂಗದವರ ಸಹಾಯದಿಂದ ದ್ವಾರಮಂಟಪ ನಿರ್ಮಾಣ ಆಗಲಿ ಎಂಬ ಉದ್ದೇಶದಿಂದ ಊರಿನ ಎಲ್ಲಾ ಜನಾಂಗದ ಪ್ರತಿ ರೈತರ ಮನೆಗೆ ೫೧ರೂ. ಕೂಲಿಕಾರರಿಗೆ ೨೫ ರೂ.ಗಳನ್ನು ಪಟ್ಟಿಯ ಮೂಲಕ ಸಂಗ್ರಹಿಸಿದ್ದಾರೆ. ದ್ವಾರಮಂಟಪದ ಕಟ್ಟಡದ ಕೆಲಸವನ್ನು ಆರಂಭದಲ್ಲಿ ಅಡವಿ ಆನಂದದೇವನಹಳ್ಳಿ ಬೋವಿ ತಿಮ್ಮಣ್ಣ ಮಾಡಿದ್ದಾನೆ. ನಂತರದ ಕೆಲಸವನ್ನು ಬೇಲ್ದಾರು ತಿಮ್ಮಪ್ಪ (ಮರಿಯಮ್ಮನಹಳ್ಳಿ) ಮಾಡಿದ್ದಾನೆ ಮತ್ತು ಊರಿನ ಕೆಲವು ಜನರು ಉಚಿತವಾಗಿ

ಕೆಲಸ ಮಾಡಿದ್ದಾರೆ. ದ್ವಾರಮಂಟಪದ ಮೇಲಿನ ಚಿತ್ರಗಳನ್ನು ಹೂವಿನಹಡಗಲಿಯ ಮಾಬುಸಾಹೇಬ್ ತಯಾರಿಸಿದ್ದಾನೆ. ದ್ವಾರಮಂಟಪ ಕಟ್ಟಡ ಕೆಲಸದ ಮುಖಂಡತ್ವವನ್ನು ಊರಿನ ಪ್ರಮುಖರಾದ ಪೂಜಾರು ಲಕ್ಷ್ಮೀಕಾಂತಪ್ಪ, ಬ್ಯಾಟಿ ಗಿಡ್ಡಪ್ಪ, ಶೆಟ್ರು ಕೊಟ್ರಬಸಪ್ಪ ಇವರು ವಹಿಸಿಕೊಂಡಿದ್ದರು.

ಚೈತ್ರಶುದ್ಧ ಪಾಡ್ಯ ೧೩.೪.೨೦೦೨ ಶನಿವಾರದಂದು ಕೂಡ್ಲಿಗಿ ಕ್ಷೇತ್ರದ ಶಾಸಕರಾದ ಶ್ರೀ ಶಿರಾಜ್‌ಷೇಖ್ ಅವರು ದೇವಸ್ಥಾನದ ಆವರಣದಲ್ಲಿ ಸುಮಾರು ೭ ಲಕ್ಷ ರೂಪಾಯಿ ವೆಚ್ಚದ "ಸಮುದಾಯಭವನ"ಕ್ಕೆ ಅಡಿಗಲ್ಲು ಹಾಕಿದ್ದಾರೆ.

## ೩.೫. ಆಸ್ತಿ ಮತ್ತು ಆಡಳಿತ

ದಾಸಯ್ಯನ ಪವಾಡದ ನಂತರ ಆಗಿನ ಕಾಲದಲ್ಲಿ ಬ್ರಿಟೀಷ ಸರಕಾರವು ದೇವಸ್ಥಾನಕ್ಕಾಗಿ ಭೂಮಿಯನ್ನು ನೀಡಿದೆ. ದೇವಸ್ಥಾನದ ಕಾರ್ಯಕ್ರಮಗಳು ಯಾವು ನಿಲ್ಲಬಾರದೆಂಬ ಉದ್ದೇಶದಿಂದ ಭೂಮಿಯನ್ನು ನೀಡಿದ್ದಾರೆ. ಆಗಿನ ಕಾಲದಲ್ಲಿ ಜನರಿಂದ ದೇವಸ್ಥಾನದ ಕಾರ್ಯಕ್ರಮಗಳನ್ನು ನಡೆಸುವುದು ಕಷ್ಟಕರವಾಗಿತ್ತು. ಕಡಲಬಾಳು ಆಂಜನೇಯ ಸ್ವಾಮಿಗೂ ಸಹ ಆತನ ವಿವಿಧ ಸೇವೆಗೆ ಭೂಮಿಯನ್ನು ನೀಡಲಾಗಿದೆ. ಅದನ್ನು ದೈವಸ್ಥರು ಈ ಕೆಳಕಂಡಂತೆ ಹಂಚಿದ್ದಾರೆ.

೧. ಆಂಜನೇಯನ ಪೂಜೆ ಮಾಡುವ ಪೂಜಾರರಿಗೆ - ೧೪ ಎಕರೆ ಭೂಮಿ

೨. ಆಂಜನೇಯನ ಪೂಜೆಗೆ
ಟೆಂಗಿನ ಕಾಯಿ ತರುವುದಕ್ಕಾಗಿ - ೧.೫೦ ಎಕರೆ ಗದ್ದೆ

೩. ಆಂಜನೇಯನ ದೀಪ ಹಚ್ಚುವುದಕ್ಕೆ
ಎಣ್ಣೆ ತರುವುದಕ್ಕಾಗಿ - ೧.೫೦ ಎಕರೆ ಗದ್ದೆ

೪. ಆಂಜನೇಯನ ಮಂಗಳಾರತಿಗಾಗಿ - ೮೦ ಸೆಂಟ್ಸ್ ಗದ್ದೆ

೫. ಆಂಜನೇಯನ ಉತ್ಸವಗಳಲ್ಲಿ
ಸನಾಯಿ ಊದುವವರಿಗೆ - ೮೦ ಸೆಂಟ್ಸ್ ಗದ್ದೆ

೬. ಆಂಜನೇಯನ ಪೂಜೆಗೆ ಹೂವು ತರುವುದಕ್ಕೆ - ೫೦ ಸೆಂಟ್ಸ್ ಗದ್ದೆ

೭. ಆಂಜನೇಯನಿಗೆ ನೈವೇದ್ಯ ತರುವುದಕ್ಕೆ - ೫೦ ಸೆಂಟ್ಸ್ ಗದ್ದೆ

ಕಡಲಬಾಳು ಆಂಜನೇಯ ಸ್ವಾಮಿಗೆ ಸುಮಾರು ೨೦ ಎಕರೆ ಆಸ್ತಿ ಇದೆ. ಇವೆಲ್ಲ ಆಸ್ತಿಗಳು ಕಂದಾಯ ಇಲಾಖೆಯಲ್ಲಿ ನೊಂದಣಿಯಾಗಿವೆ. ಆದರೆ ೧೯೭೫-೭೬ರ ತುರ್ತುಪರಿಸ್ಥಿತಿಯಲ್ಲಿ ಈ ಭೂಮಿಗಳನ್ನು ಯಾರು ಉಳುಮೆ ಮಾಡುತ್ತಿದ್ದರೋ ಅವರ ಹೆಸರಲ್ಲಿ ನೊಂದಾಣಿಯಾದವು. ಹೀಗಾಗಿ ಆಂಜನೇಯ ದೇವಸ್ಥಾನಕ್ಕೆ ಆದಾಯವಿಲ್ಲದಂತಾಗಿದೆ.

**ದೇವಸ್ಥಾನದ ಆಡಳಿತ :** ೧೯೩೦ಕ್ಕಿಂತ ಮುಂಚಿತವಾಗಿ ಆಂಜನೇಯ ಸ್ವಾಮಿ ದೇವಸ್ಥಾನವೂ ಮದ್ರಾಸ್ ಸರ್ಕಾರದ ಎಂಡೋಮೆಂಟ್ ಬೋರ್ಡ್‌ಗೆ ಸೇರಿತ್ತು. ದೇವಸ್ಥಾನಕ್ಕೆ ಸರ್ಕಾರಿ ಜಮೀನು ಇರುವುದರಿಂದ ವರ್ಷಕ್ಕೆ ೩೪ ರೂಪಾಯಿ ದೇವಸ್ಥಾನದ ಆಸ್ತಿತೆರಿಗೆಯನ್ನು ಕಟ್ಟಬೇಕಾಗಿತ್ತು.

೧೯೩೪-೩೫ ರಲ್ಲಿ ಒಂದು ವರ್ಷದ ದೇವಸ್ಥಾನದ ಆಸ್ತಿತೆರಿಗೆಯನ್ನು ಕಟ್ಟದ್ದರಿಂದ ಆಗಿನ ಕಂದಾಯ ಅಧಿಕಾರಿಗಳಾದ ಹನುಮಂತರಾವ್ ಅವರು ಆಂಜನೇಯನ ಬೆಳ್ಳಿ ಸಾಮಾನುಗಳನ್ನು ಹರಾಜು ಹಾಕಲು ಬಂದರು. ಊರಿನ ದೈವಸ್ಥರೆಲ್ಲಾ ತೀರ್ಮಾನ ತೆಗೆದುಕೊಂಡು ಆಂಜನೇಯನ ಸಾಮಾನುಗಳನ್ನು ಕಳೆಯಬಾರದೆಂಬ ಉದ್ದೇಶದಿಂದ ಊರಿನ ನಾಯಕರ ಪೂಜಾರು ಮನೆತನದ ಶ್ರೀಮಂತ ಮಹಿಳೆಯಾದ ವೆಂಕಟಭೀಮಮ್ಮನಿಂದಲೇ ೩೬ ರೂಪಾಯಿಗಳಿಗೆ ಬೆಳ್ಳಿ ಸಾಮಾನುಗಳನ್ನು ಹರಾಜು ಮಾಡಿಸಿ, ತೆರಿಗೆಯನ್ನು ಕಟ್ಟಿದರು. ಹರಾಜಾದ ನಂತರ ಆಂಜನೇಯನ ಬೆಳ್ಳಿ ಮತ್ತು ಬಂಗಾರದ ಸಾಮಾನುಗಳನ್ನು ಆಕೆಯ ಜವಾಬ್ದಾರಿ ಕೊಟ್ಟರು. ವೆಂಕಟಭೀಮಮ್ಮ ಆಗಿನ ಕಾಲದಲ್ಲಿ ೧೨ ರೂ. ಕೊಟ್ಟು ಒಂದು ಟ್ರಜರಿ (ಹಣದ ಪೆಟ್ಟಿಗೆ)ಯನ್ನು ತಂದು ಆ ಸಾಮಾನುಗಳನ್ನು ತನ್ನ ಸ್ವಾಧೀನದಲ್ಲಿಟ್ಟುಕೊಂಡು ಆಂಜನೇಯನಿಗೆ ಆ ಸಾಮಾನುಗಳನ್ನು ಉಪಯೋಗಿಸುವ ಸಂದರ್ಭದಲ್ಲಿ ಕೊಡುತ್ತಿದ್ದಳು. ಈಗಲೂ ಸಾಮಾನುಗಳು ಆಕೆಯ ಮನೆತನದವರಲ್ಲಿಯೇ ಇದ್ದು ಅವರ ಮನೆಯಿಂದಲೇ ಆಂಜನೇಯ ಸಾಮಾನುಗಳನ್ನು ಪೂಜಾ ಸಂದರ್ಭದಲ್ಲಿ ತೆಗೆದುಕೊಂಡು ಹೋಗಲಾಗುತ್ತಿದೆ. ದೇವಸ್ಥಾನದ ಸಾಮಾನುಗಳು ಹರಾಜಾದಾದ್ದು ಬಹಳ ಜನರಿಗೆ ನೋವುಂಟಾಯಿತು. ಇದನ್ನರಿತ ಊರಿನ ಗೌಡರಾದ ಗುರುಬಸವನಗೌಡರು ತಮ್ಮ ಸ್ವಂತ ಕೆಲಸದ ನಿಮಿತ್ತ ಮದ್ರಾಸ್‌ಗೆ ಹೋದ ಸಂದರ್ಭದಲ್ಲಿ ಎಂಡೋಮೆಂಟ್ ಬೋರ್ಡ್‌ಗೆ ಭೇಟಿ ನೀಡಿ ದೇವಸ್ಥಾನದ ಆರ್ಥಿಕ ಪರಿಸ್ಥಿತಿಯನ್ನು ಅಧಿಕಾರಿಗಳಿಗೆ ವಿವರಿಸಿದರು.

೧೯೩೭ ರಲ್ಲಿ ಎಂಡೋಮೆಂಟ್ ಬೋರ್ಡ್‌ನ ಬಳ್ಳಾರಿ ಶಾಖೆಯಿಂದ ತಿಪ್ಪೇಸ್ವಾಮಿ ಎಂಬ ಅಧಿಕಾರಿಯು ಬಂದು ಊರಿನ ಮುಖಂಡರನ್ನು ಕರೆಯಿಸಿ ದೇವಸ್ಥಾನದ ಆರ್ಥಿಕ ಪರಿಸ್ಥಿತಿಯನ್ನು ಗಮನಿಸಿ ದೇವಸ್ಥಾನಕ್ಕೆ ಯಾವುದೇ ವರಮಾನವಿಲ್ಲ ಎಂಬುದನ್ನು ಜನರಿಂದ ಬರೆಯಿಸಿಕೊಂಡು ಹೋಗಿ ದೇವಸ್ಥಾನದ ಆಸ್ತಿಗೆ ಹಾಕುವ ತೆರಿಗೆಯನ್ನು ದಾಖಲೆ ಪುಸ್ತಕದಿಂದ ತೆಗೆದುಹಾಕಿದರು. ಅಂದಿನಿಂದ ಊರಿನ ಪ್ರಮುಖ ಮುಖಂಡರೊಬ್ಬರು ಧರ್ಮಕರ್ತರಾಗಿ ದೇವಸ್ಥಾನದ ಸಂಪೂರ್ಣ ಜವಾಬ್ದಾರಿಯನ್ನು ವಹಿಸಿಕೊಂಡು, ಆಂಜನೇಯನ ಸೇವಾ ಕಾರ್ಯಕ್ರಮಗಳನ್ನು ನಡೆಸುತ್ತಾ ಬಂದರು. ಮೊದಲಿಗೆ ಪೂಜಾರು ವೆಂಕಟಭೀಮಮ್ಮ, ಪಾಟೀಲ್ ಗುರುಬಸವನಗೌಡ, ಪೂಜಾರು ಗಡುಪಪ್ಪ, ಪೂಜಾರು ಭೀಮಪ್ಪ, ಓಂಟಿಗೋಡಿ ವಿರುಪಣ್ಣ ಇವರೆಲ್ಲರೂ ಒಬ್ಬರ ನಂತರ ಒಬ್ಬರು ಕ್ರಮವಾಗಿ ಧರ್ಮಕರ್ತರಾಗಿ ಸೇವೆಸಲ್ಲಿಸಿದ್ದಾರೆ. ಆದರೆ ಈಗ ಆ ಪದ್ಧತಿ ಇಲ್ಲ. ಊರಿನ ನಾಯಕ ಮನೆತನದ ಪ್ರಮುಖ ಮುಖಂಡರೆಲ್ಲರೂ ಸೇರಿ ಆಂಜನೇಯನ ಸೇವಾ ಕಾರ್ಯಕ್ರಮಗಳನ್ನು ಪ್ರತಿವರ್ಷ ನಡೆಸುತ್ತಾ ಬಂದಿದ್ದಾರೆ.

## ೩.೬. ವಾಸ್ತುಶಿಲ್ಪ

ಆಂಜನೇಯ ದೇವಸ್ಥಾನ ಸಂಪೂರ್ಣವಾಗಿ ಕಲ್ಲಿನಿಂದ ನಿರ್ಮಾಣ ಆಗಿದೆ. ಗಚ್ಚು ಮತ್ತು ಗಾರೆಗಳನ್ನು ಉಪಯೋಗಿಸಿದ್ದಾರೆ. ದೇವಸ್ಥಾನದ ನಿರ್ಮಾಣಕ್ಕೆ ಬಳಸಲು ಉಪಯೋಗಿಸಿದ ಕಲ್ಲಿನ ಗಾಲಿಯು ದೇವಸ್ಥಾನದ ಆವರಣದಲ್ಲಿ ಇಂದಿಗೂ ಇದೆ. ಸುಮಾರು ೪ ಅಡಿ ಜಗಲಿಯ ಮೇಲೆ ನಿರ್ಮಿಸಲಾದ ಈ ದೇವಸ್ಥಾನವು ಗರ್ಭಗುಡಿ, ವಿಶಾಲವಾದ ಸಭಾಮಂಟಪ ಮೇಲೆ ಗೋಪುರವನ್ನು ಒಳಗೊಂಡಿದೆ. ಮೊದಲಿನ ಗೋಪುರವನ್ನು ಪೂಜಾರು ವೆಂಕಟಭೀಮಮ್ಮ ಹರಕೆ ತೀರಿಸುವುದಕ್ಕಾಗಿ ಕಟ್ಟಿಸಿದ್ದಳು. ಕಾಲಾನಂತರ ಗೋಪುರ ಶಿಥಿಲಗೊಂಡಾಗ ಗ್ರಾಮದವರೆಲ್ಲರೂ ಸೇರಿ ಮತ್ತೆ ಹೊಸದಾಗಿ ಗೋಪುರವನ್ನು ನಿರ್ಮಿಸಿದರು.

ಗರ್ಭಗೃಹದ ಒಳಗೆ ಆಂಜನೇಯನ ಉಬ್ಬುಶಿಲ್ಪವಿದೆ. ಇದರ ಪ್ರವೇಶ ದ್ವಾರವು ಸಾದಾ ಕೆತ್ತನೆಯಿಂದ ಕೂಡಿದೆ. ಸಭಾಮಂಟಪದಲ್ಲಿ ಆರು ಕಂಬಗಳಿದ್ದು ಇವು ಮೂರು ಹಂತಗಳಲ್ಲಿ ಕೆತ್ತಲ್ಪಟ್ಟಿವೆ. ಇದರ ದ್ವಾರ ಮಂಟಪದ ಮೇಲಿರುವ ಕಮಾನಿನಲ್ಲಿ ರಾಮ, ಲಕ್ಷ್ಮಣ, ಸೀತೆ, ಗಣೇಶ ಹಾಗೂ ಹನುಮಂತನ ಚಿತ್ರಗಳಿವೆ. ಕಣಶಿಲೆಯಿಂದ ನಿರ್ಮಾಣವಾದ ಈ ದೇವಾಲಯವು ಸುತ್ತಲೂ ಪ್ರಾಕಾರವನ್ನು ಹೊಂದಿದೆ. ಪ್ರಾಕಾರದಲ್ಲಿ ವೀರಗಲ್ಲು, ಗಜಲಕ್ಷ್ಮಿ, ಭೈರವ ಹಾಗೂ ಭೈರವಿ ಶಿಲ್ಪಗಳಿವೆ.[೮]

ದೇವಸ್ಥಾನದ ಪ್ರಾಕಾರ ಬಹಳ ವಿಶಾಲವಾಗಿದೆ. ದೇವಸ್ಥಾನವನ್ನು ಪ್ರದಕ್ಷಿಣೆ ಹಾಕಲು ಅನುಕೂಲವಾಗಲೆಂದು ಸುತ್ತಲೂ ಬಹಳ ಸ್ಥಳವಾಕಾಶ ಕಲ್ಪಿಸಲಾಗಿದೆ. ದೇವಸ್ಥಾನದ ಸುತ್ತಲೂ ಕಲ್ಲಿನ ಪೌಳಿ (ಕಾಂಪೌಂಡ್) ಕಟ್ಟಲಾಗಿದೆ. ಹಾಗೂ ಪೌಳಿಯ ಆವರಣದಲ್ಲಿ ಒಂದು ಛತ್ರವಿದೆ. ದೇವಾಲಯದ ಒಳಗೆ ಮತ್ತು ಹೊರಗೆ ಅದ್ಭುತವಾದ ಹಾಗೂ ಹೆಚ್ಚಿನದಾದ ಕುಸುರಿ ಕಲೆಯನ್ನು ಮತ್ತು ಅಂತಹ ಕೆತ್ತನೆಯ ಮಹತ್ವವೇನೂ ಕಂಡು ಬರುವುದಿಲ್ಲ.

ದೇವಸ್ಥಾನದ ಮುಂದಿನ ದ್ವಾರಮಂಟಪವನ್ನು ೧೯೯೯ರಲ್ಲಿ ದಾನಿಗಳ ಮುಖಾಂತರ ಹಣ ಸಂಗ್ರಹಿಸಿ ಕಟ್ಟಿಸಲಾಗಿದೆ. ದ್ವಾರ ಮಂಟಪವು ಬಹಳ ಸುಂದರವಾಗಿದೆ. ದೇವಸ್ಥಾನವು ಊರಿನ ಮಧ್ಯ ಭಾಗದಲ್ಲಿ ದಕ್ಷಿಣಾಭಿಮುಖವಾಗಿ ಭವ್ಯವಾಗಿ ತಲೆ ಎತ್ತಿನಿಂತಿದೆ. ಒಟ್ಟಾರೆ ಈ ದೇವಸ್ಥಾನವು ಬಹಳ ಆಕರ್ಷಣೆಯಾಗಿದೆ.

## ೩.೭. ಪವಾಡಗಳ ಹಿಂದಿನ ಸ್ವರೂಪ

ನಮಗೆ ಸಾಧ್ಯವಾಗದ ಯಾವುದೇ ಕೆಲಸ ಕಾರ್ಯಗಳು ಮತ್ತೊಬ್ಬರಿಂದ ನಿರ್ಭಯವಾಗಿ ಅಷ್ಟೇ ಸಹಜ ರೀತಿಯಲ್ಲಿ ನಡೆದಾಗ ಅದನ್ನು 'ಕಣ್‌ಕಟ್' ಎಂದು ಅಥವಾ ಮಾಯಮಂತ್ರವೆಂದು ಅಥವಾ ವಿಶೇಷವಾಗಿ 'ಪವಾಡ' ಎಂದು ಕರೆಯುತ್ತಾರೆ. ಈ ಪವಾಡ ಎನ್ನುವುದು ಚಿಕ್ಕದಾಗಿರಬಹುದು, ದೊಡ್ಡದಾಗಿರಲೂಬಹುದು. ಉದಾಹರಣೆಗೆ ವೀರಭದ್ರ ದೇವರ ಭಕ್ತರು ಆ ದೇವರ ಮುಂದೆ ಆವೇಶದಿಂದ ಒಡುಪುಗಳನ್ನು ಹೇಳುತ್ತಾ ನಾಲಿಗೆ ಮತ್ತು ತುಟಿಗಳಿಗೆ ಶಸ್ತ್ರವನ್ನು ಚುಚ್ಚಿ (ಹಾಕಿ)

ಕೊಳ್ಳುತ್ತಾರೆ. ಮೈಲಾರಲಿಂಗನ ಭಕ್ತರು ಭಕ್ತಿಯ ಆವೇಶದಲ್ಲಿ ಮೈಮರೆತು ಕಾಲಿಗೆ ಮಳೆ ಹೊಡೆದು ಕೊಳ್ಳುತ್ತಾರೆ. ಅಲ್ಲದೆ ಹುಲಿಗೆಮ್ಮನ ಜೋಗತಿಯರು ತಲೆಯ ಮೇಲೆ ಯಾವುದೇ ಆಧಾರವಿಲ್ಲದೆ ನೀರಿನ ಕೊಡವನ್ನಿಟ್ಟುಕೊಂಡು ತದೇಕ ಚಿತ್ತದಿಂದ ಕುಣಿಯುತ್ತಾರೆ. ಹೀಗೆ ಆ ದೇವರ ಭಕ್ತಿಯಲ್ಲಿ ತಲ್ಲೀನವಾದಾಗ ಬಾಹ್ಯ ಜಗತ್ತನ್ನೇ ಸಂಪೂರ್ಣ ಮೈಮರೆತು ಅಸಾಧ್ಯವಾದುದನ್ನು ಸಾಧಿಸುವುದರ ಮೂಲಕ ಆಶ್ಚರ್ಯಕರವಾದ ಕೆಲವು ಪವಾಡಗಳು ನಡೆಯಲ್ಪಡುತ್ತವೆ.'

ಯಾವುದೇ ಜನಪದ ದೈವಗಳು ಪ್ರಸಿದ್ಧಿಯನ್ನು ಪಡೆದಿರುವುದು ಅಲ್ಲಿ ನಡೆದುಕೊಂಡು ಬಂದಿರುವ ವಿಶಿಷ್ಟವಾದ ಪವಾಡಗಳಿಂದ. ಒಂದೊಂದು ದೈವಕ್ಕೂ ಒಂದೊಂದು ರೀತಿಯ ಪವಾಡಗಳನ್ನು ಜಾತ್ರೆಯ ಸಂದರ್ಭದಲ್ಲಿ ಮಾಡುವುದನ್ನು ನಾವು ಇಂದಿಗೂ ಕಾಣಬಹುದು. ಈ ಪವಾಡಗಳು ವಿಶಿಷ್ಟವಾದ ಜನಪದ ಆಚರಣೆಗಳಾಗಿವೆ. ಪವಾಡ ಮಾಡುವ ವ್ಯಕ್ತಿ ಮತ್ತು ದೈವದ ನಡುವೆ ನಿಕಟ ಸಂಬಂಧವಿರುತ್ತದೆ. ಕೆಲವು ಪವಾಡಗಳು ವಂಶಪಾರಂಪರ್ಯವಾಗಿರುತ್ತವೆ. ಕೆಲವು ಪವಾಡಗಳು ವಂಶಪಾರಂಪರ್ಯವಾಗಿರುವುದಿಲ್ಲ. ಪವಾಡ ಮಾಡುವ ವ್ಯಕ್ತಿಯನ್ನು 'ಪವಾಡಪುರುಷ' ಎಂದೇ ಕರೆಯುತ್ತಾರೆ. ಸಮಾಜದಲ್ಲಿ ಈತನಿಗೆ ಒಳ್ಳೆಯ ಸ್ಥಾನಮಾನ ಇರುತ್ತದೆ. ಜನರು ಈತನಲ್ಲಿ ದೈವವನ್ನು ಕಾಣುತ್ತಾರೆ. ಊರಲ್ಲಿ ಹನುಮಪ್ಪನ ಗುಡಿ ಇದ್ದು ಆತನ ರಥೋತ್ಸವ ನಡೆಯುತ್ತಿದ್ದರೆ ಅಲ್ಲಿ ಪವಾಡ ಮಾಡುವ ವ್ಯಕ್ತಿಗಳು ಇರುತ್ತಾರೆ.

ಹಾಗೆಯೇ ಕಡಲಬಾಳಿನ ಆಂಜನೇಯಸ್ವಾಮಿ ಜಾತ್ರೆಯಲ್ಲಿ ಕೆಲವು ಪವಾಡಗಳು ನಡೆಯುತ್ತವೆ. ಆಂಜನೇಯಸ್ವಾಮಿ ನಂಬಿದಂತಹ ಭಕ್ತರಿಗೆ ವರಗಳನ್ನು ಪವಾಡದ ಮೂಲಕ ಅನುಗ್ರಹಿಸುತ್ತಾನೆ ಎನ್ನುವ ನಂಬಿಕೆ ಜನರಲ್ಲಿದೆ.

ಕಡಲಬಾಳು ಗ್ರಾಮದಲ್ಲಿ ಪ್ರತಿವರ್ಷ ಆಂಜನೇಯನ ರಥೋತ್ಸವದ ಮರುದಿನ ಬೆಳಿಗ್ಗೆ ಅಗ್ನಿಕೊಂಡ ಸಾಯಾಂಕಾಲ ಮುಳ್ಳಿನ ಪವಾಡಗಳು ಬಹಳ ಕಾಲದಿಂದಲೂ ನಡೆದುಕೊಂಡು ಬಂದಿವೆ. ಈ ಪವಾಡಗಳು ಆರಂಭವಾಗುವುದಕ್ಕಿಂತ ಮೊದಲು ಪವಾಡದ ಕಳಸಪ್ಪ (ದಾಸಯ್ಯ)ನು ಬೇರೆ ಬೇರೆ ಪವಾಡಗಳನ್ನು ಮಾಡಿ ಅಮರನಾಗಿದ್ದಾನೆ. ನಂತರ ಬಂದ ಬ್ಯಾಟಿ ಕಡ್ಲೆಪ್ಪನಿಂದ ಅಗ್ನಿಕೊಂಡ ಪವಾಡ ಮತ್ತು ಮುಳ್ಳು ಪವಾಡ ಆರಂಭವಾಗಿ ಆತನ ಮರಣಾನಂತರ ಆತನ ಕೊನೆಯ ತಮ್ಮನಾದ ಬ್ಯಾಟಿ ಬಾಳಪ್ಪನು ಈ ಪವಾಡಗಳನ್ನು ಪ್ರತಿವರ್ಷ ಮಾಡುತ್ತಿದ್ದಾನೆ. ಈ ಪವಾಡಗಳ ಜೊತೆ ಇವರು ಬೇರೆ ಬೇರೆ ಪವಾಡಗಳನ್ನು ಸಹ ತೋರಿಸಿದ್ದಾರೆ. ಅವುಗಳನ್ನು ಪ್ರತ್ಯಕ್ಷ ಕಂಡ ಜನರು ಇದ್ದಾರೆ. ಅವರು ತೋರಿದ ಪವಾಡಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

**೧. ಪವಾಡ ಪುರುಷ ಕಳಸಪ್ಪ (ದಾಸಯ್ಯ) :** ಕಳಸಪ್ಪನ ಉದ್ಯೋಗ ನೇಕಾರಿಕೆ ಈತ ಜಾತಿಯಲ್ಲಿ ಪದ್ಮಶಾಲಿ. ಈತನು ಆಂಜನೇಯನ ಪರಮಭಕ್ತನಾಗಿದ್ದನು. ದೇವಸ್ಥಾನದ ಪೂಜಾ ಸಂದರ್ಭದಲ್ಲಿ ಮತ್ತು ಇತರೆ ಸಂದರ್ಭದಲ್ಲಿ ಶಂಖ ಊದುವುದರ ಮೂಲಕ ತನ್ನ ಸೇವೆಯನ್ನು ಸಲ್ಲಿಸುತ್ತಿದ್ದನು. ದಾಸಯ್ಯ ಹೆಚ್ಚಿನ ಸಮಯವನ್ನು ಆಂಜನೇಯನ ದೇವಸ್ಥಾನದಲ್ಲಿಯೇ ಕಳೆಯುತ್ತಿದ್ದನು.

ಆಗ ಬ್ರಿಟೀಷರ ಆಳ್ವಿಕೆ ಇತ್ತು. ಆಗ ದೇವಸ್ಥಾನದ ಆವರಣದಲ್ಲಿ ಬಹಳ ಹಳೆಯ ಕಾಲದ ಹುಣುಸೆ ಮರಗಳಿದ್ದವು. ಬಹಳ ಹಳೆಯ ಮರಗಳಾದ್ದರಿಂದ ಜನರಿಗೆ ತೊಂದರೆಯಾಗಬಹುದೆಂಬ ದೃಷ್ಟಿಯಿಂದ ಅವುಗಳನ್ನು ಕಡಿಸಲು ಬ್ರಿಟೀಷ್ ಅಧಿಕಾರಿಗಳು ಊರಿಗೆ ಬಂದರು. ಮತ್ತು ಹುಣುಸೆ ಮರದಲ್ಲಿ ದೆವ್ವಗಳು ವಾಸವಾಗಿರುತ್ತವೆ ಎಂಬ ನಂಬಿಕೆ ಆಗಿನ ಕಾಲದ ಜನರಲ್ಲಿತ್ತು. ಮರಗಳನ್ನು ಕಡಿಸಲು ಬ್ರಿಟೀಷ್ ಅಧಿಕಾರಿಗಳು ಊರಿಗೆ ಬಂದಾಗ ಜನರು ಅದಕ್ಕೆ ಯಾವುದೇ ತಕರಾರನ್ನು ಮಾಡಲಿಲ್ಲ. ಮರಗಳನ್ನು ಕಡಿಯುವ ವಿಚಾರ ದೇವಸ್ಥಾನದಲ್ಲಿದ್ದ ದಾಸಯ್ಯನ ಕಿವಿಗೆ ಬಿದ್ದಿತು. ದಾಸಯ್ಯ ಮರಗಳನ್ನು ಕಡಿಯದಂತೆ ಬ್ರಿಟೀಷ್ ಅಧಿಕಾರಿಗಳಿಗೆ ಅಡ್ಡಿಪಡಿಸಿದನು. "ಬೇಕಾದರೆ ನನ್ನನ್ನು ಕಡಿದು ಮರಗಳನ್ನು ಕಡಿಯಿರಿ" ಎಂದು ಎಚ್ಚರಿಸಿ ಮರದ ಹತ್ತಿರ ಹೋಗಿ ಕುಳಿತುಕೊಂಡನು. ಈ ಮಾತು ದಾಸಯ್ಯನಲ್ಲಿರುವ ಪರಿಸರ ಪ್ರಜ್ಞೆಯನ್ನು ನಮಗೆ ತೋರಿಸುತ್ತದೆ. ಆದರೂ ಬ್ರಿಟೀಷ್ ಅಧಿಕಾರಿಗಳು ಈತನ ಮಾತಿಗೆ ಒಪ್ಪಲಿಲ್ಲ. ಕೊನೆಗೆ ದಾಸಯ್ಯ ಅಧಿಕಾರಿಗಳಿಗೆ "ನಾಳೆಯ ದಿವಸ ನಾನು ಒಂದು ಪವಾಡವನ್ನು ಮಾಡುತ್ತೇನೆ. ಆ ಪವಾಡವು ಯಶಸ್ವಿಯಾದರೆ ನೀವು ಮರ ಕಡಿಯಬಾರದು. ಒಂದು ವೇಳೆ ಪವಾಡವು ಯಶಸ್ವಿಯಾಗದಿದ್ದರೆ ನೀವು ಮರ ಕಡಿಯಬಹುದು" ಎಂದು ಕರಾರು ಹಾಕಿ ಮನೆಗೆ ಹೋದನು. ಅದರಂತೆ ಬ್ರಿಟೀಷ್ ಅಧಿಕಾರಿಗಳು ಈತನ ಪವಾಡವನ್ನು ನೋಡಲು ಕಾತುರರಾದರು.

ಇತ್ತ ಮನೆಯಲ್ಲಿ ದಾಸಯ್ಯ ರಾತ್ರಿ ಮಲಗುವ ಮುಂಚೆ "ಮಾರುತಿ ನೀನೇ ನನ್ನನ್ನು ಈ ಕಷ್ಟದಿಂದ ಪಾರುಮಾಡಿ ಕಾಪಾಡುತಂದೆ" ಎಂದು ಧ್ಯಾನಿಸುತ್ತಾ ಮಲಗಿದನು. ಆಗ ಮಾರುತಿ ಕನಸಿನಲ್ಲಿ ತಾನು ನೇಯುವ ಮಗ್ಗದ ಮೇಲೆ ನಾಟ್ಯವಾಡುತ್ತಾ ನಿಂತು "ಭಕ್ತನಾದ ದಾಸಯ್ಯನೇ ಹೆದರಬೇಡ , ಕತ್ಯಾಯನಮರಡಿ ಗ್ರಾಮದ ತೋಟದಲ್ಲಿ ಕರಿಕುಂಬಳ ಕಾಯಿಯನ್ನು ಹರಿದುಕೊಂಡು ಬಂದು ಅದನ್ನು ಸಣ್ಣ ಸಣ್ಣ ತುಂಡಗಳನ್ನಾಗಿ ಮಾಡಿ ಖಾಲಿ ಗಡಿಗೆಯಲ್ಲಿ ಹಾಕಿ ಮುಚ್ಚಿಡು. ಸ್ವಲ್ಪ ಸಮಯದ ನಂತರ ಕೊಯ್ದ ಕುಂಬಳಕಾಯಿ ತುಂಡುಗಳೆಲ್ಲಾ ಸೇರಿ ಮೊದಲಿನ ರೀತಿಯ ಕುಂಬಳಕಾಯಿ ಆದರೆ ನೀನು ಪವಾಡ ಮಾಡು ಇಲ್ಲದಿದ್ದರೆ ಮಾಡಬೇಡ" ಎಂದು ಮಾರುತಿ ಎಚ್ಚರಿಕೆ ನೀಡಿ ಮಾಯವಾದನು.

ಅದರಂತೆ ಬೆಳಿಗ್ಗೆ ಎದ್ದವನೇ ದಾಸಯ್ಯ ಕತ್ಯಾಯನಮರಡಿ ಗ್ರಾಮಕ್ಕೆ ಹೋಗಿ ಕರಿಕುಂಬಳಕಾಯಿಯನ್ನು ತಂದು ಅದನ್ನು ಸಣ್ಣ ಸಣ್ಣ ತುಂಡುಗಳನ್ನಾಗಿ ಮಾಡಿ ಖಾಲಿ ಗಡಿಗೆಯಲ್ಲಿ ಹಾಕಿ ಮುಚ್ಚಿಟ್ಟನು. ಸ್ವಲ್ಪ ಸಮಯದ ನಂತರ ಗಡಿಗೆಯನ್ನು ತೆರೆದಾಗ ಕುಂಬಳಕಾಯಿ ಮೊದಲಿನ ರೀತಿ ಆಗಿತ್ತು. ದಾಸಯ್ಯ ಪವಾಡ ಮಾಡಲು ಸಿದ್ಧನಾದನು. ದಾಸಯ್ಯನು ಪವಾಡ ಮಾಡುವ ಸುದ್ಧಿ ಊರಿನ ಎಲ್ಲಾ ಜನರಿಗೆ ಗೊತ್ತಾಗಿ ನೋಡಲು ಆಗಮಿಸಿದರು. ದೇವಸ್ಥಾನದ ಸಂಭಾಗಣದಲ್ಲಿ ಊರಿನ ಎಲ್ಲಾ ದೈವಸ್ಥರು ಸೇರಿದರು. ಆಗ ದಾಸಯ್ಯನು ದೇವಸ್ಥಾನದಲ್ಲಿದ್ದ ಕತ್ತಿಯನ್ನು ತೆಗೆದುಕೊಂಡು ತನ್ನ ನಾಲಗೆಯನ್ನು ಕೊಯ್ದುಕೊಂಡನು. ಕೊಯ್ದ ನಾಲಗೆಯ ತುಂಡನ್ನು ದೇವಸ್ಥಾನದ ಹೊಸ್ತಿಲ ಮೇಲೆ ಇಟ್ಟು ದೇವಸ್ಥಾನದ ಗರ್ಭಗುಡಿಯನ್ನು ಪ್ರವೇಶಿಸಿ "ಕದವನ್ನು ಮುಚ್ಚಿ ಬೀಗ ಹಾಕಿ ಮೂರು ದಿನಗಳ ನಂತರ ತೆಗೆಯಿರಿ" ಎಂದು ಹೇಳಿದನು. ಮೂರು ದಿನಗಳ ನಂತರ ದೇವಸ್ಥಾನದ ಒಳಗಿನಿಂದ ಶಂಖವು

ಮೊಳಗಿತು. ಆಗ ಊರಿನ ದೈವಸ್ಥರು ಕದವನ್ನು ತೆಗೆದರು. ದಾಸಯ್ಯನ ನಾಲಗೆ ಮೊದಲಿನಂತೆ ಆಗಿತ್ತು. ದಾಸಯ್ಯನ ಪವಾಡಕ್ಕೆ ಊರಿಗೆ ಊರೇ ಬೆರಗಾಯಿತು. ಬ್ರಿಟೀಷ ಅಧಿಕಾರಿಗಳಿಗೂ ಸಹ ಆಶ್ಚರ್ಯವಾಯಿತು. ಈತನನ್ನು ಮೇಲಿನ ಅಧಿಕಾರಿಗಳಿಗೆ ತೋರಿಸಲು ಬಳ್ಳಾರಿಗೆ ಕರೆದುಕೊಂಡು ಹೋಗಿ ನಡೆದ ಸಂಗತಿಯನ್ನೆಲ್ಲಾ ವಿವರಿಸಿದರು. ಆದರೆ ಆ ಮೇಲಾಧಿಕಾರಿ ಇವರ ಮಾತನ್ನು ನಂಬದೆ ದಾಸಯ್ಯನನ್ನು ಜೈಲಿಗೆ ತಳ್ಳಿ ಚಿತ್ರಹಿಂಸೆ ಕೊಡಲು ಆದೇಶಿಸಿದನು. ಆಗ ದಾಸಯ್ಯನು ಜೈಲಿನಲ್ಲಿ "ಬಿಡಬ್ಯಾಡ ಎನಕೈಯ ಕಡಲಪುರ ಹನುಮಂತರಾಯ" ಎಂದು ಆಂಜನೇಯನನ್ನು ಪ್ರಾರ್ಥಿಸಲು ಜೈಲಿನ ಕೋಣೆಯ ಬೀಗಗಳು ತಾವಾಗಿಯೇ ಬಿಚ್ಚಿಕೊಂಡವು. ಇದನ್ನು ಕಂಡು ಜೈಲಿನ ಅಧಿಕಾರಿಗಳಿಗೆ ಆಶ್ಚರ್ಯವಾಯಿತು. ನಂತರ ಆತನನ್ನು ನ್ಯಾಯಲಯಕ್ಕೆ ಕರೆದೊಯ್ದರು. ಅಲ್ಲಿಯೂ ಸಹ ಆತನ ಕೈಗೆ ಹಾಕಿದ್ದ ಬೇಡಿಗಳು ತಾವಾಗಿಯೇ ಬಿಚ್ಚಿಕೊಂಡವು. ತನಗೆ ಚಿತ್ರ ಹಿಂಸೆ ನೀಡಲು ಆದೇಶಿಸಿದ ಅಧಿಕಾರಿಯ ಕಣ್ಣು ಕುರುಡಾದವು. ಆ ಅಧಿಕಾರಿ ದಾಸಯ್ಯನ ಮಹಿಮೆ ತಿಳಿದು "ತನ್ನದು ಸರ್ವತಾ ತಪ್ಪಾಯಿತು ನನ್ನನ್ನು ಕ್ಷಮಿಸು ತಂದೆ" ಎಂದು ನ್ಯಾಯಾಲಯದಲ್ಲಿ ದಾಸಯ್ಯನ ಕಾಲಿಗೆ ಬಿದ್ದಾಗ ಕಣ್ಣು ಮೊದಲಿನಂತೆ ಆದವು. ಈ ಅಧಿಕಾರಿ ಕಡಲಬಾಳು ಹನುಮಪ್ಪನ ನೆನಪಿಗಾಗಿ ಬಳ್ಳಾರಿ ನ್ಯಾಯಾಲಯದ ಆವರಣದಲ್ಲಿ ಹನುಮಂತನ ಗುಡಿಯನ್ನು ಕಟ್ಟಿಸಿದನು.

ನಂತರ ಅಧಿಕಾರಿ ದಾಸಯ್ಯನನ್ನು ಬಿಡುಗಡೆಗೊಳಿಸಿ ಊರಿಗೆ ಕಳಿಸುವ ವ್ಯವಸ್ಥೆ ಮಾಡಿದ. ದಾಸಯ್ಯನನ್ನು ವಾಹನದಲ್ಲಿ ಆತನ ಕೊರಳಿಗೆ ಹೂವಿನ ಹಾರವನ್ನು ಹಾಕಿಕೊಂಡು ಬಹಳ ಮರ್ಯಾದೆಯಿಂದ ಊರಿಗೆ ಕರೆದುಕೊಂಡು ಬಂದರು. ದಾಸಯ್ಯನ ಜೀವನೋಪಾಯಕ್ಕೆ ಬೇಕಾದ ದವಸ ಧಾನ್ಯಗಳನ್ನು ವಾಹನದಲ್ಲಿ ಹೇರಿಕೊಂಡು ಬಂದು ದಾಸಯ್ಯನ ಮನೆಯ ಕಣಜದಲ್ಲಿ ಹಾಕಿದರು. (ದಾಸಯ್ಯನ ಮನೆಯಲ್ಲಿ ಈಗಲೂ ನಾವು ಕಣಜಗಳನ್ನು ಕಾಣಬಹುದು). ದಾಸಯ್ಯ ವಾಹನದಲ್ಲಿ ಪುನಃ ವಾಪಾಸು ಬಂದಿರುವುದನ್ನು ನೋಡಿ ಜನರಿಗೆ ಆಶ್ಚರ್ಯವಾಯಿತು. ದಾಸಯ್ಯನನ್ನು ನೋಡಲು ಊರಿಗೆ ಊರೇ ಸೇರಿತು. ಆಂಜನೇಯನ ದೇವಸ್ಥಾನದಲ್ಲಿ ಬ್ರಿಟೀಷ್ ಅಧಿಕಾರಿಗಳು ಜೈಲು ಮತ್ತು ನ್ಯಾಯಾಲಯದಲ್ಲಿ ನಡೆದ ಸಂಗತಿಯನ್ನು ವಿವರಿಸಿದರು. ದಾಸಯ್ಯನ ಮತ್ತೊಂದು ಪವಾಡಕ್ಕೆ ಜನ ಮಾರು ಹೋದರು. ಬ್ರಿಟೀಷ ಅಧಿಕಾರಿಗಳು ದಾಸಯ್ಯನಿಗೆ ನಿನಗೆ ಏನುಬೇಕು ಕೇಳು ಎಂದಾಗ ದಾಸಯ್ಯ "ನನಗೆ ಏನೂ ಬೇಡ, ಐದು ಸಿವುಡುಮೆದಿ, ಒಂದು ನಿಧಿ. (ರೈತರು ಬೆಳೆಯುವ ಬೆಳೆಯಲ್ಲಿ ಐದು ಸಿವುಡು ಮೇವು ಮತ್ತು ಕಾಳಿನರಾಶಿಯ ಒಂದು ನಿಧಿ) ತನ್ನ ಮರಣಾನಂತರ ಸಮಾಧಿಗಾಗಿ ಒಂದಿಷ್ಟು ಜಾಗ ಕೊಡುವಂತೆ ಮಾಡಿದರೆ ಸಾಕು" ಎಂದನು. ಆಗ ಬ್ರಿಟೀಷ್ ಅಧಿಕಾರಿ ದಾಸಯ್ಯನಿಗೆ ಐದು ಸಿವುಡುಮೆದಿ, ಒಂದು ನಿಧಿಯನ್ನು ಕೊಡಲು ಗ್ರಾಮಸ್ಥರಿಗೆ ಆಜ್ಞೆ ಮಾಡಿ ಹೋದನು.

ಒಮ್ಮೆ ಊರಿನಲ್ಲಿ ಮಳೆ ಹೋಗಿ ಬರಗಾಲ ಉಂಟಾಗಿ ಜನರಿಗೆ ಬಹಳ ತೊಂದರೆಯಾಗಿತ್ತು. ಎಷ್ಟು ದಿನಗಳಾದರೂ ಮಳೆಯೇ ಆಗಲಿಲ್ಲ. ಆಗ ದಾಸಯ್ಯನು ಅನ್ನ, ನೀರು ಬಿಟ್ಟು ಕಡಲಬಾಳಿಗೆ ೧೦ ಕಿ.ಮೀ. ದೂರದಲ್ಲಿರುವ ತಿಮ್ಮಪ್ಪನ ಗುಡ್ಡದ ಮೇಲಿರುವ ಕೋತಿಕಲ್ಲು ಗುಡ್ಡದ ಮೇಲೆ ೨೧

ದಿವಸ ತಪ್ಪಸ್ಸು ಮಾಡಿದನು. ಆಗ ಮಳೆಯಾಯಿತು. ಆಗ ಇಡಿ ಊರಿಗೆ ಊರೇ ಹೋಗಿ ವಾದ್ಯಗಳ ಸಮೇತ ದಾಸಯ್ಯನನ್ನು ಮೆರವಣಿಗೆ ಮಾಡುತ್ತಾ ಊರಿಗೆ ಕರೆದುಕೊಂಡು ಬಂದರು.

ಅಂದಿನಿಂದ ಈತನಿಗೆ 'ಪವಾಡದ ದಾಸಯ್ಯ'ನೆಂಬ ಹೆಸರು ಬಂದಿತು. ಅಂದಿನಿಂದ ದಾಸಯ್ಯನಿಗೆ ಊರಿನಲ್ಲಿ ಗೌರವ ಹೆಚ್ಚಾಯಿತು. ದಾಸಯ್ಯ ಹೇಳಿದ್ದೇ ವೇದವಾಕ್ಯವಾಯಿತು. ಹೀಗೆ ದಾಸಯ್ಯನ ಪವಾಡಗಳು ಸುತ್ತಮುತ್ತಲಿನ ಗ್ರಾಮದಲ್ಲಿ ಹಬ್ಬಿದವು. ಕಡಲಬಾಳು ಹನುಮಪ್ಪನ ಮಹಿಮೆಯನ್ನು ಜನರು ಕೊಂಡಾಡತುತ್ತಿದರು. ಭಕ್ತರ ಸಮೂಹವೇ ಸ್ವಾಮಿಯ ದರ್ಶನಕ್ಕೆ ಬರಹತ್ತಿತು. ದಾಸಯ್ಯ ಸಾಯುವ ಮುನ್ನ ಮುಂದೆ ತಮ್ಮ ವಂಶದಲ್ಲಿ ಆರು ಬೆರಳಿನ ಮಗು ಜನಿಸಿದಾಗ ಡೊಕ್ಕಿ ಪವಾಡ ಮಾಡುತ್ತದೆ ಎಂದು ತಿಳಿಸಿದ್ದಾನೆಂದು ಆತನ ವಂಶಜರು ಈಗಲೂ ಹೇಳುತ್ತಾರೆ.

ಇಂದಿಗೂ ದಾಸಯ್ಯನ ಮನೆತನದವರು ಊರಲ್ಲಿ ಇದ್ದಾರೆ. ಅವರಿಗೆ 'ಪವಾಡದವರು' ಎಂದು ಕರೆಯುತ್ತಾರೆ. ಈಗಲೂ ಅವರು ದಾಸಯ್ಯ ಮಾಡುವ ಕಾಯಕ (ಶಂಖ ಊದುವುದು) ಮಾಡುತ್ತಿದ್ದಾರೆ. ದೇವರ ಪ್ರತಿಯೊಂದು ಕಾರ್ಯದಲ್ಲಿ ಅವರು ಭಾಗಿಯಾಗುತ್ತಾರೆ. ಊರಿನ ಜನರು ರಾಶಿ ಮಾಡುವಾಗ ಒಂದು ನಿಧಿಯನ್ನು ಅವರಿಗೆ ಹಾಕುತ್ತಾರೆ. ಹಿಂದೆ ಬೆಳೆಯ ಮೇವನ್ನು ಸಹ ಕೊಡುತ್ತಿದ್ದರು. ದಾಸಯ್ಯನ ಸಮಾಧಿಯನ್ನು ಊರಿನ ದಕ್ಷಿಣ ದಿಕ್ಕಿನ ಮಸೀದಿ ಹತ್ತಿರದಲ್ಲಿ ನಾವು ಇಂದಿಗೂ ಕಾಣಬಹುದು.

**೨. ಪವಾಡ ಪುರುಷ ಕಡ್ಲೆಪ್ಪ :** ಕಳಸಪ್ಪ (ದಾಸಯ್ಯ)ನ ಮರಣಾನಂತರ ಕೆಲವು ವರ್ಷಗಳ ಕಾಲ ಊರಿನಲ್ಲಿ ಯಾವುದೇ ಪವಾಡಗಳು ಜರುಗಲಿಲ್ಲ. ಕ್ರಿ.ಶ. ೧೯೩೨ ರಲ್ಲಿ ಬ್ಯಾಟಿ ಕಡ್ಲೆಪ್ಪನಿಂದ ಮೊಟ್ಟ ಮೊದಲ ಬಾರಿಗೆ ಆಂಜನೇಯನ ರಥೋತ್ಸವದ ಮರುದಿನ ಬೆಳಿಗ್ಗೆ ಅಗ್ನಿಕೊಂಡ, ಸಾಯಂಕಾಲ ಮುಳ್ಳುಪವಾಡ ಪ್ರಾರಂಭವಾದವು. ಆದರೆ ರಥೋತ್ಸವದ ಮರುದಿನ ಬ್ಯಾಟಿಗಿಡದ ಆಚರಣೆ ಮೊದಲಿನಿಂದಲೂ ನಡೆದುಕೊಂಡು ಬಂದಿದೆ. ಇದನ್ನು ನಾಯಕರ ಒಂದು ಪ್ರಮುಖ ಮನೆತನದವರು ಮಾಡುವುದರಿಂದ ಅವರಿಗೆ 'ಬ್ಯಾಟೀರು' ಮನೆತನದವರು ಎಂದು ಕರೆಯುತ್ತಾರೆ. ಕಡ್ಲೆಪ್ಪ ಸಹ ಈ ಬ್ಯಾಟೀರು ಮನೆತನದಲ್ಲಿ ಜನಿಸಿದ್ದಾನೆ. ಈತನು ಮೊದಲಿನಿಂದಲೂ ಆಂಜನೇಯನ ಪರಮಭಕ್ತನಾಗಿದ್ದನು. ಸ್ವಾಮಿಯ ವಿವಿಧ ಸೇವೆಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದ. ವೃತ್ತಿಯಿಂದ ಕೃಷಿಕನಾಗಿದ್ದನು. ಈತ ಪಿಂಜಾರು ಹೆಗ್ನಾಳು ಗ್ರಾಮದಲ್ಲಿ ಮದುವೆಯಾಗಿದ್ದನು. ಈತನಿಗೆ ಆಂಜನೇಯ ಒಲಿಯಲು ಮತ್ತು ಈತನಿಗೆ ಪವಾಡ ಮಾಡಲು ಪ್ರೇರಣೆಯಾದದ್ದು, ಪವಾಡ ಮಾಡಿದ ಬಗೆಯನ್ನು ಆ ಸಮಯದಲ್ಲಿ ಈತನ ಒಡನಾಡಿಯಾದ ಬ್ಯಾಟಿ ಕುಲ್ಲಪ್ಪನು ಕಡ್ಲೆಪ್ಪನ ಬಗ್ಗೆ ಮಾಹಿತಿಯನ್ನು ನೀಡಿದ್ದಾನೆ.

**ಆಂಜನೇಯ ಒಲಿದದ್ದು :** ಕಡ್ಲೆಪ್ಪ ಮದುವೆಯಾದ ನಂತರ ಹೆಗ್ನಾಳ್ ಗ್ರಾಮದಲ್ಲಿಯೇ ಹೆಚ್ಚಾಗಿ ವಾಸವಾಗಿರುತ್ತಿದ್ದ. ಈತನಿಗೆ ಪ್ರಾರಂಭದಲ್ಲಿ ಮಾರುತಿ ಮೈಮೇಲೆ ಆವೇಶವಾಗಿ ಬಂದಾಗ ಈತನ ವರ್ತನೆಯನ್ನು ಮನೆಯಲ್ಲಿ ಸಹೋದರರು ನಂಬಲಿಲ್ಲ. ಕೆಲಸ ಮಾಡಲಾಗದೆ ಸುಳ್ಳು ನಾಟಕ ಆಡುತ್ತಾನೆ ಅಂದರು. ಆತನಿಗೆ ಮಾನಸಿಕವಾಗಿ ಹಿಂಸೆ ನೀಡಿದರು. ಊಟವನ್ನು ಸಹ ಕೊಡಲಿಲ್ಲ. ಕೆಲವು ದಿನಗಳ ಕಾಲ ಈತನು ಅಡವಿಯಲ್ಲಿ ಬೇವಿನಸೊಪ್ಪು, ಕಕ್ಕಿಸೊಪ್ಪು (ಆಂಜನೇಯನ ಪತ್ರಿ) ತಿಂದು ಕಾಲಕಳೆದನು.

ನಂತರ ಮನೆಯವರು ಈತನನ್ನು ಮನೆಯಲ್ಲಿ ಕೂಡಿಹಾಕಿ ಬೀಗ ಹಾಕಿದರು. ಆದರೆ ಹಾಕಿದ ಬೀಗ ಹಾಕಿದ ಹಾಗೆ ಇದ್ದು ಕಡ್ಲೆಪ್ಪ ಹೊರಗಡೆ ಬಂದಿದ್ದ ಆವಾಗ ಮನೆಯವರು ಈತನ ಮೈಯಲ್ಲಿ ಮಾರುತಿ ಆವೇಶವಾಗುವುದು ನಿಜವೆಂದು ನಂಬಿದರು.

ಕಡ್ಲೆಪ್ಪ ಒಮ್ಮೆ ಕೃಷ್ಣಾಪುರ ಗ್ರಾಮಕ್ಕೆ ಹೋದಾಗ ಅಲ್ಲಿ ಮೈಮೇಲೆ ಮಾರುತಿ ಆವೇಶವಾಗಿ ಬಂದು ಅಲ್ಲಿಂದಲೇ ಓಡೋಡಿ ಕೇಕೆ ಹಾಕುತ್ತಾ ಕಡಲಬಾಳು ಆಂಜನೇಯನ ದೇವಸ್ಥಾನಕ್ಕೆ ಬಂದನು. ಆಗ ಊರಿನ ದೈವಸ್ಥರೆಲ್ಲಾ ಸೇರಿ ಈತನನ್ನು ವಿಚಾರಿಸಿದಾಗ ತಾನು ಇನ್ನು ಮುಂದೆ ಪ್ರತಿವರ್ಷ ಆಂಜನೇಯನ ರಥೋತ್ಸವದ ಮರುದಿನ ಅಗ್ನಿಪವಾಡ ಮತ್ತು ಮುಳ್ಳುಪವಾಡ ಮಾಡುವುದಾಗಿ ಹೇಳಿದನು. ಅದೇ ವರ್ಷ ೧೯೩೨ರಿಂದ ರಥೋತ್ಸವದ ಮರುದಿನ ಬೆಳಿಗೆ ಅಗ್ನಿಪವಾಡ, ಸಾಯಾಂಕಾಲ ಮುಳ್ಳುಪವಾಡ ಆರಂಭವಾದವು.

ಮುಳ್ಳು ಪವಾಡ ಮಾಡುವುದಕ್ಕಿಂತ ಮುಂಚಿತವಾಗಿ ಆಂಜನೇಯನ ದೇವಸ್ಥಾನದಲ್ಲಿ ಈತ ಕೆಂಪು ಬಣ್ಣದ ಚಡ್ಡಿಯನ್ನು ಧರಿಸಿ ವಾದ್ಯಗಳ ಜೊತೆಗೆ ದೇವಸ್ಥಾನದ ಹೊರಗಡೆ ಓಡೋಡಿ ಬಂದು ದೇವಸ್ಥಾನದ ಮುಂದಿನ ಈಗಿನ ಮಹಾದ್ವಾರದ ಪಕ್ಕದ ಕಟ್ಟೆಯ ಮೇಲಿನಿಂದ (ಸುಮಾರು ೪ ಅಡಿ ಎತ್ತರ ಇದೆ) ಸುಲಭವಾಗಿ ಹಾರುತ್ತಿದ್ದ ವಾದ್ಯಗಳ ಜೊತೆ ಕುಣಿಯುವಾಗ ಈತನನ್ನು ಯಾರು ಹಿಡಿದು ಕೊಳ್ಳುವಂತಿರಲಿಲ್ಲ. ಯಾರ ಸಹಾಯವು ಈತನಿಗೆ ಬೇಕಾಗಿರಲಿಲ್ಲ, ಒಬ್ಬಾತನೇ ಅನಾಯಾಸವಾಗಿ ಕುಣಿಯುತ್ತಿದ್ದ ಊರಿನ ಎಲ್ಲಾ ದೇವಸ್ಥಾನಗಳ ದೇವರ ದರ್ಶನ ತೆಗೆದುಕೊಳ್ಳಲು ಈತ ಓಡಿ ಹೋಗುವಾಗ ಈತನ ಹಿಂದೆ ಜನರಿಗೆ ಓಡಲು ಆಗುತ್ತಿರಲಿಲ್ಲ. ಜನರಿಗೆ ಓಡಿ ಹೋಗುವುದೇ ಕಷ್ಟವಾಗುತ್ತಿತ್ತು. ಸುಮಾರು ಎರಡು ತಾಸು ವಾದ್ಯಗಳ ಜೊತೆ ಕುಣಿದರೂ ಧಣಿವು ಆಗುತ್ತಿರಲಿಲ್ಲ. ಆ ಸಂದರ್ಭದಲ್ಲಿ ನೀರನ್ನು ಸಹ ಕುಡಿಯುತ್ತಿರಲಿಲ್ಲ. ಈತನಿಗೆ ಮಾರುತಿ ಆವೇಶವಾಗಿ ಕುಣಿಯುವುದನ್ನು ನೋಡಲು ಸಾವಿರಾರು ಜನ ಸೇರುತ್ತಿತ್ತು. ಇಳಿವಯಸ್ಸಿನಲ್ಲಿ ಆರೋಗ್ಯ ಸರಿ ಇಲ್ಲದಿದ್ದರೂ ಈತ ಪವಾಡ ಮಾಡುವುದನ್ನು ನಿಲ್ಲಿಸಿರಲಿಲ್ಲ. ಆತನ ಮೈಮೇಲೆ ಮಾರುತಿ ಆವೇಶವಾಗಿ ಆತ ನುಡಿದಂತೆ ಆಗುತ್ತಿತ್ತು. ಹೇಳಿದೆಲ್ಲಾ ನಿಜವಾಗಿವೆ. ಯುಗಾದಿಯ ದಿನದಿಂದ ಆತ ಮುಳ್ಳು ಪವಾಡ ಮುಗಿಯವವರೆಗೂ ಐದು ದಿನ ನೀರನ್ನು ಬಿಟ್ಟು ಏನನ್ನೂ ಸೇವಿಸುತ್ತಿರಲಿಲ್ಲ. ಈತ ಸುಮಾರು ೩೫ ವರ್ಷಗಳ ಕಾಲ ಪವಾಡ ಮಾಡಿದ್ದಾನೆ.

೧೯೬೭ ರಲ್ಲಿ ಈತನ ಮರಣಾನಂತರ ಆತನ ಕೊನೆಯ ತಮ್ಮನಾದ ಬ್ಯಾಟಿ ಬಾಳಪ್ಪನಲ್ಲಿ ಮಾರುತಿ ಆವೇಶವಾಗಿ ಬಂದು ಅಂದಿನಿಂದ ಆ ಪವಾಡಗಳನ್ನು ಈತ ಮಾಡುತ್ತಿದ್ದಾನೆ.

ಕಡ್ಲೆಪ್ಪನ ಪವಾಡಗಳು

೧. ಆಂಜನೇಯನ ರಥೋತ್ಸವದ ಮರುದಿನ ಅಂದರೆ ಬ್ಯಾಟಿ ಗಿಡದ ದಿನ ಮುಳ್ಳು ಪವಾಡ ಮಾಡುವುದಕ್ಕಿಂತ ಮುಂಚಿತವಾಗಿ ಡೊಳ್ಳು, ಸನಾಯಿ, ಸಮಾಳ, ನಂದಿಕೋಲು ಮುಂತಾದ ವಾದ್ಯಗಳೊಂದಿಗೆ ಆಂಜನೇಯನ ಕೆಂಪು ಬಣ್ಣದ ಚಡ್ಡಿ ಧರಿಸಿ ಕೈಯಲ್ಲಿ ಬಾಣವನ್ನು ಹಿಡಿದುಕೊಂಡು

ಕುಣಿಯುತ್ತಾ ಊರಿನ ಎಲ್ಲಾ ದೇವಸ್ಥಾನಗಳಿಗೆ ಹೋಗಿ ದರ್ಶನ ಪಡೆದು ಪಾದಗಟ್ಟಿ ಹತ್ತಿರವಿರುವ ಬೇವಿನ ಕಟ್ಟೆಯ ಮೇಲೆ ಮುಳ್ಳಿನ ಪಾಲಕಿಯಲ್ಲಿ ಮಲಗುವುದು ವಾಡಿಕೆ.

ಆದರೆ ಒಮ್ಮೆ ಕಡ್ಲೆಪ್ಪನು ಕಲ್ಲೇಶ್ವರ ದೇವಸ್ಥಾನದಲ್ಲಿ ಮುಳ್ಳುಪವಾಡದ ದಿನ ವಾದ್ಯಗಳ ಜೊತೆ ಕುಣಿಯುತ್ತಾ ದೇವರ ದರ್ಶನ ತೆಗೆದುಕೊಳ್ಳಲು ಓಡೋಡಿ ಹೋದನು. ಆದರೆ ದೇವಸ್ಥಾನದ ಬಾಗಿಲಿಗೆ ದೊಡ್ಡ ಬೀಗ ಹಾಕಲಾಗಿತ್ತು. ಆಗ ಈತ ಮಂಡಿಯೂರಿ ನೆಲಕ್ಕೆ ಕುಳಿತು ತನ್ನ ಕೈಯಿಂದ ಬೀಗದ ಮೇಲೆ ಕೈಯಿಡಲು ಬೀಗ ಬಿಚ್ಚಿ ದೇವಸ್ಥಾನದ ಕದಗಳು ತಾವಾಗಿಯೇ ತೆರೆದವು. ನಂತರ ಕಲ್ಲೇಶ್ವರನ ದರ್ಶನವನ್ನು ಪಡೆದುಕೊಂಡನು.

೨. ಕಡ್ಲೆಪ್ಪ ಮದುವೆಯಾದದ್ದು ಪಿಂಜಾರುಹೆಗ್ಡಾಳ್ ಗ್ರಾಮದಲ್ಲಿ ಆತ ಪ್ರತಿ ಶನಿವಾರ ಆಂಜನೇಯನ ಪಾಲಕಿ ಉತ್ಸವದಲ್ಲಿ ಸೇವೆಸಲ್ಲಿಸುತ್ತಿದ್ದ. ಕೆಲವೊಂದು ಸಾರಿ ಶನಿವಾರ ಹೆಂಡತಿಯ ಊರಿನಲ್ಲಿದ್ದರೂ ತಪ್ಪದೇ ಪಾಲಕಿ ಉತ್ಸವಕ್ಕೆ ಹಾಜರಾಗುತ್ತಿದ್ದ. ಇದನ್ನು ನೋಡಿದ ಅವರು ಆತನನ್ನು ಮನೆಯ ಕೋಣೆಯಲ್ಲಿ ಕೂಡಿಹಾಕಿ ಬೀಗ ಹಾಕಿದರು. ಆದರೆ ಆತ ಶನಿವಾರ ದಿನ ಕಡಲಬಾಳಿನ ಆಂಜನೇಯನ ದೇವಸ್ಥಾನದಲ್ಲಿರುತ್ತಿದ್ದ. ಮನೆಯ ಕೋಣೆಗೆ ಹಾಕಿದ ಬೀಗ ಹಾಕಿದ ಹಾಗೆಯೇ ಇತ್ತು.

೩. ಕಡ್ಲೆಪ್ಪ ಬಸವಂತ-ಬಲವಂತ ಬಯಲಾಟದಲ್ಲಿ ಒಮ್ಮೆ ಹೆಣ್ಣು ಪಾತ್ರ ಮಾಡಿದ್ದ. ಈತನಿಗೆ ಆ ಸಮಯದಲ್ಲಿ ಮಾರುತಿ ಆವೇಶವಾಗಿ ಬಂದು ಅದೇ ವೇಷದಲ್ಲಿಯೇ ಹೆಗ್ಡಾಳ್ ಹತ್ತಿರದ ದಬಕಲಬಂಡಿ ಹನುಮಪ್ಪನ ಗುಡಿಯ ಹತ್ತಿರ ಓಡಿ ಹೋಗಿ, ನಂತರ ಕಡಲಬಾಳಿನ ರಾಮದೇವರ ಗುಡ್ಡಕ್ಕೆ ಬಂದು, ಅಲ್ಲಿಂದ ಹಗರಿಕ್ಯಾದ್ಗಿಹಳ್ಳಿ ಕರಿಕಟ್ಟೆ ಹನುಮಪ್ಪನಿಗೆ ಹೋಗಿ, ನಂತರ ಕಡಲಬಾಳಿನ ಹಳ್ಳಿ ಹನುಮಪ್ಪನ ಗುಡಿಗೆ ಬಂದು, ಅಲ್ಲಿಂದ ಕಡಲಬಾಳಿನ ಪಾದಗಟ್ಟಿ ಹನುಮಪ್ಪನ ದರ್ಶನ ತೆಗೆದುಕೊಂಡು ಕೊನೆಗೆ ಊರ ಆಂಜನೇಯನ ದೇವಸ್ಥಾನಕ್ಕೆ ಬಂದಿದ್ದಾನೆ. ಜನರ ಕೈಗೆ ಆತ ಸಿಕ್ಕಿರಲಿಲ್ಲ. ಅಷ್ಟು ದೂರ ಓಡಿ ಬಂದರೂ ಆತನ ಮೈಮೇಲೆ ಹಾಕಿಕೊಂಡಿದ್ದ ಬಂಗಾರದ ಆಭರಣಗಳು ಒಂದೂ ಬಿಚ್ಚಿರಲಿಲ್ಲ. ತೊಟ್ಟಿದ್ದ ಸೀರೆ ಸ್ವಲ್ಪವೂ ಜಾರದೆ ಹಾಗೆಯೇ ಇತ್ತು.

೪. ಪ್ರತಿವರ್ಷ ಶ್ರಾವಣಮಾಸದಲ್ಲಿ ಆಂಜನೇಯನ ಉತ್ಸವ ಮೂರ್ತಿಯನ್ನು ಪಾಲಕಿಯಲ್ಲಿ ಹಂಪಸಾಗರ ಹೊಳೆಸ್ನಾನಕ್ಕೆ ಕರೆದುಕೊಂಡು ಹೋಗುತ್ತಾರೆ. ಈ ಸಂದರ್ಭದಲ್ಲಿ ಆ ಊರಿನ 'ಸರೂರ' ಮತ್ತು 'ಮತ್ತೂರ' ಮನೆತನದವರು ಅಗಸಿ ಬಾಗಿಲ ಕದಗಳಿಗೆ ಬೀಗ ಹಾಕಿಸಿದ್ದರು. ಪ್ರತಿವರ್ಷ ಉತ್ಸವ ಮೂರ್ತಿಯ ಪಾಲಕಿ ಅಲ್ಲಿಯೇ ಹೋಗುತ್ತಿತ್ತು. ಪಾಲಕಿಯ ಹಿಂದೆ ಪವಾಡ ಮಾಡುವ ಕಡ್ಲೆಪ್ಪನು ಕತ್ತರಿಬಾಣ ಹಿಡಿದು ನಿಂತಿದ್ದನು. ಆಗ ಆತನಿಗೆ ಮಾರುತಿ ಆವೇಶವಾಗಿ ಬಂದು ಹಾಕಿದ ಬೀಗಗಳು ತಾವಾಗಿಯೇ ಬಿಚ್ಚಿ ಕದಗಳು ತೆರೆದವು. ಆಗ ಪಾಲಕಿಯೊಂದಿಗೆ ಎಲ್ಲರೂ ಪ್ರವೇಶಿಸಿದರು. ನಂತರ ಅವರ ಮನೆತನವೇ ನಾಶವಾಗಿ ಹೋಯಿತು.

೫. ಶಿರಸ್ಸು ಪವಾಡ ಮಾಡಲು ಮುಂದಾದದ್ದು : ಕ್ರಿ.ಶ. ೧೯೩೬ ರಲ್ಲಿ ಕಡ್ಲೆಪ್ಪನಿಗೆ ಮೈಯಲ್ಲಿ ಮಾರುತಿ ಆವೇಶವಾಗಿ ಬಂದು ತಾನು ಶಿರಸ್ಸು ಪವಾಡ ಮಾಡುವುದಾಗಿ ಹೇಳಿದ. ಅಂದರೆ ತನ್ನ

ಶಿರಸ್ಸನ್ನು ಕತ್ತಿಯಿಂದ ಕತ್ತರಿಸಿಕೊಂಡು ಮತ್ತೆ ಕೂಡಿಸುವುದು. ತನ್ನ ಜೀವಕ್ಕೆ ಏನಾದರೂ ಮಾಡಿಕೊಂಡಾನು ಎಂದು ಊರಿನ ದೈವಸ್ಥರಿಗೆ ಭಯವಾಯಿತು. ಶಿರಸ್ಸು ಪವಾಡ ಯಶಸ್ವಿಯಾಗುವುದಕ್ಕೆ ಮೊದಲು ಒಂದು ಕುರುಹು ತೋರಿಸು ಎಂದು ಊರಿನ ದೈವಸ್ಥರು ಕೇಳಿದರು. ಕಡ್ಲೆಪ್ಪನ ಮಾತಿನಂತೆ ಕೆಚ್ಚೆನಮರಡಿ ಗ್ರಾಮದಲ್ಲಿ ಕುಂಬಳಕಾಯಿಯನ್ನು ಹರಿದು ತಂದರು. ಶನಿವಾರ ದಿನ ರಾತ್ರಿ ಆಂಜನೇಯನ ದೇವಸ್ಥಾನದಲ್ಲಿ ಊರಿನ ದೈವಸ್ಥರೆಲ್ಲಾ ಸೇರಿದರು. ಕುಂಬಳಕಾಯಿಯನ್ನು ಪೂಜೆ ಮಾಡಿ ನಂತರ ಅದನ್ನು ಎರಡು ಭಾಗ ಮಾಡಿ ಆಂಜನೇಯನ ಮೂರ್ತಿ ಹತ್ತಿರ ಎರಡು ಕಡೆ ಕುಂಬಳಕಾಯಿಯ ಒಂದೊಂದು ಭಾಗವನ್ನು ಇಟ್ಟು ದೇವಸ್ಥಾನಕ್ಕೆ ಬಾಗಿಲು ಮುಚ್ಚಿ ಎರಡು ಬೀಗ ಹಾಕಿದರು. ಬೆಳಿಗ್ಗೆ ಹೊತ್ತಿಗೆ ತುಂಡಾದ ಕುಂಬಳಕಾಯಿ ಕೂಡುತ್ತದೆ. ಆಗ ನಾನು ಶಿರಸ್ಸು ಪವಾಡ ಮಾಡುತ್ತೇನೆ ಎಂದು ಕಡ್ಲೆಪ್ಪ ಹೇಳಿದ್ದ. ರಾತ್ರಿ ಊರಿನ ದೈವಸ್ಥರೆಲ್ಲಾ ಅಲ್ಲಿಯೇ ಮಲಗಿದರು. ಬೆಳಿಗ್ಗೆ ದೇವಸ್ಥಾನದ ಬಾಗಿಲು ತೆಗೆದು ನೋಡಿದರು. ಆದರೆ ಕುಂಬಳಕಾಯಿ ಕೂಡಿರಲಿಲ್ಲ. ಕಾರಣ ಕೂಡುವ ಸಂದರ್ಭದಲ್ಲಿ ಆದಿನ ರಾತ್ರಿ ಹರಿಜನ ಕೇರಿಯ ಗೊಲ್ಲರಹಳ್ಳಿ ಮನೆತನದಲ್ಲಿ ಶ್ರಮ (ಮರಣ) ಆದಕಾರಣ ಅಮಂಗಲ ಆಗಿ ಕುಂಬಳಕಾಯಿ ಕೂಡಿರಲಿಲ್ಲ. ಕುಂಬಳಕಾಯಿ ಕೂಡದ್ದರಿಂದ ಕಡ್ಲೆಪ್ಪ ಆ ದಿನ ಶಿರಸ್ಸುಪವಾಡ ಮಾಡಲಿಲ್ಲ.

### ಕಡಲಬಾಳು ಆಂಜನೇಯ ಸ್ವಾಮಿಯ ಪವಾಡಗಳು

೧. ಒಮ್ಮೆ ಊರಲ್ಲಿ ಕಾಲರ ಬಂದು ದಿನಕೊಬ್ಬರು ಸಾಯುತ್ತಿದ್ದರು. ಇದರಿಂದ ಊರಿನ ಜನರಿಗೆ ಬಹಳ ಚಿಂತೆಯಾಯಿತು. ಕೊನೆಗೆ ಊರಿನ ದೈವಸ್ಥರು ಆಂಜನೇಯನ ಮೊರೆ ಹೋದರು. ಎಲ್ಲರೂ ದೇವಸ್ಥಾನದಲ್ಲಿ ಸೇರಿದರು. ಅದೇ ಸಂದರ್ಭದಲ್ಲಿ ದೇವಸ್ಥಾನದ ಮುಂದೆ ಮುಸ್ಲಿಂರ ಶವವನ್ನು ಕೊಂಡೊಯ್ಯಲಾಯಿತು. ಆಗ ದೈವಸ್ಥರು ಆಂಜನೇಯನನ್ನು ಕುರಿತು "ಈ ರೀತಿ ಊರಲ್ಲಿ ಶವ ಹೋಗುವುದು ಇಂದೇ ಕೊನೆಯಾಗಬೇಕು. ಒಂದು ವೇಳೆ ಕೊನೆಯಾಗದಿದ್ದರೆ ನಾವು ನಿನ್ನ ನಿತ್ಯ ಪೂಜೆ ಮಾಡುವುದಿಲ್ಲ" ಎಂದು ಹೂವು ಕೇಳಿದರು. ಆಗ ಆಂಜನೇಯ ಕಂಕಣ ಭಾಗದಿಂದ ಹೂವನ್ನು ಕೊಟ್ಟ. ಅಂದಿನಿಂದ ಊರಲ್ಲಿ ಕಾಲದಿಂದ ಒಬ್ಬ ವ್ಯಕ್ತಿಯೂ ಸಾಯಲಿಲ್ಲ. ಇದರಿಂದ ಆಂಜನೇಯನ ಮೇಲೆ ಜನರಲ್ಲಿ ಭಕ್ತಿ ಇನ್ನೂ ಹೆಚ್ಚಾಯಿತು.

೨. ತಿಮಪ್ಪನ ಗುಡ್ಡಕ್ಕೆ ಮಾರುತಿ ಉತ್ಸವ ಮೂರ್ತಿಯನ್ನು ಪಾಲಕಿಯಲ್ಲಿ ಪ್ರತಿವರ್ಷ ಶ್ರವಣ ಮಾಸದಲ್ಲಿ ಕರೆದೊಯ್ಯುತ್ತಾರೆ. ಆ ವರ್ಷ ಪಾಲಕಿಯ ಜೊತೆಯಲ್ಲಿ ಪವಾಡ ಮಾಡುವ ಕಡ್ಲೆಪ್ಪ ಕತ್ತರಿ ಬಾಣ ಹಿಡಿದು ನಿಂತಿದ್ದನು. ಆ ಜಾತ್ರೆಗೆ ಸುತ್ತಮುತ್ತಲಿನ ಅನೇಕ ಊರುಗಳಲ್ಲಿಯ ದೇವತೆಗಳ ಪಾಲಕಿಗಳು ಸಹ ಬರುತ್ತವೆ. ಈ ಕಡಲಬಾಳಪ್ಪನ ಪಾಲಕಿ ಹೋದ ಮೇಲೆಯೇ ಆತನ ಪಾಲಕಿಯನ್ನು ಮುಂದಿಟ್ಟುಕೊಂಡು ಉಳಿದೆಲ್ಲ ಪಾಲಕಿಗಳು ಗುಡ್ಡದ ಮೇಲಿನ ವೆಂಕಟೇಶ ದೇವರಗುಡಿಗೆ ಹೋಗುತ್ತವೆ. ಆದರೆ ಒಮ್ಮೆ ಆನೆಕಲ್ಲುಗೌಡ ಪಾಲಕಿ ಒಳಗೆ ಹೋಗಲು ಪ್ರವೇಶ ನೀಡದೆ ತಡೆದು ನಿಲ್ಲಿಸಿದ. ಆದರೂ ಕಡಲಬಾಳು ಹನುಮಪ್ಪನ ಪಾಲಕಿ ತಡೆಯದೆ ಆತನನ್ನು ನೂಕಿಕೊಂಡು ಒಳಗೆ ಪ್ರವೇಶಿಸಿತು. ಸ್ವಲ್ಪ

ದಿನಗಳ ನಂತರ ಆನೆಕಲ್ಲು ಗೌಡನ ಕಣ್ಣು ಕುರುಡಾದವು. ನಂತರ ತಾನು ಮಾಡಿದ ತಪ್ಪಿಗಾಗಿ ಪಶ್ಚತ್ತಾಪಪಟ್ಟನು.

೩. ಮತ್ತೊಂದು ವರ್ಷ ತಿಮ್ಮಪ್ಪನ ಗುಡ್ಡಕ್ಕೆ ಪಾಲಕಿ ಉತ್ಸವದಲ್ಲಿ ಆಂಜನೇಯ ಮೂರ್ತಿಯನ್ನು ಕರೆದೊಯ್ಯುವಾಗ ಕೆಚ್ಚಿನಮರಡಿ ಗ್ರಾಮದಲ್ಲಿ ಹೊಲದ ಯಜಮಾನನಾದ ಚಿಮ್ಮಹಳ್ಳಿ ಹನುಮಂತಪ್ಪನು ಆಂಜನೇಯನ ಪಾಲಕಿ ಹೋಗುವ ದಾರಿಯಲ್ಲಿ ಹೊಲಕ್ಕೆ ಮುಳ್ಳಿನ ಬೇಲಿ ಹಾಕಿದ್ದನು. ಏಕೆಂದರೆ ತನ್ನ ಹೊಲದಲ್ಲಿ ಬೆಳೆದ ಪೈರು ಹಾಳಾಗಬಾರದೆಂಬ ಉದ್ದೇಶದಿಂದ. ಆದರೆ ಹನುಮಪ್ಪನ ಪಾಲಕಿ ಆ ಮುಳ್ಳಿನ ಬೇಲಿಯನ್ನೇ ತುಳಿದುಕೊಂಡು ಮುಂದೆ ಪ್ರವೇಶಮಾಡಿತು. ಆಗ ಪಾಲಕಿಯ ಜೊತೆಯಲ್ಲಿ ಈಗ ಪವಾಡ ಮಾಡುವ ಬಾಳಪ್ಪ ಕತ್ತರಿ ಬಾಣವನ್ನು ಹಿಡಿದು ನಿಂತಿದ್ದನು. ನಂತರ ಬೇಲಿ ಹಾಕಿದ ಯಜಮಾನನ ಕಣ್ಣು ಕುರುಡಾಗಿ ಸ್ವಲ್ಪ ದಿನದಲ್ಲಿಯೇ ಆತ ಮರಣವನ್ನು ಹೊಂದಿದನು.

೪. ೧೯೯೯ರಲ್ಲಿ ದೇವಸ್ಥಾನದ ದ್ವಾರಮಂಟಪದ ಕೆಲಸ ಮುಗಿಯಿತು. ದ್ವಾರಮಂಟಪದ ಮೇಲೆ ಕಳಸವಿಡಲು ಊರಿನ ದೈವಸ್ಥರು ಹಗರಿಬೊಮ್ಮನಹಳ್ಳಿಯ ಗಂಗಾವತಿ ರಾಮಣ್ಣನ ಮಗ ಸುದರ್ಶನನ ಹತ್ತಿರ ಹೋಗಿ ದ್ವಾರಮಂಟಪದ ಮೇಲಿಡಲು ಕಳಸವನ್ನು ಕೊಡಿಸಲು ಕೇಳಿದರು. ಆಗ ಆತ ನಿರಾಕರಿಸಿ ಕಳುಹಿಸಿದ. ಇತ್ತ ರಾತ್ರಿ ಸುದರ್ಶನ ಮನೆಯಲ್ಲಿ ಮಲಗಿಕೊಂಡಾಗ ಆತನ ಮೇಲೆ ಮತ್ತು ಮನೆಯ ಮೇಲೆ ಮಂಗಗಳು ಕುಣಿದಾಡಿದಂತೆ ಆಯಿತು. ರಾತ್ರಿ ನಿದ್ದೆಯೇ ಬರಲಿಲ್ಲ. ಆಗ ತಮ್ಮ ತಂದೆಗೆ ವಿಷಯ ತಿಳಿಸಲಾಗಿ ಅವರು 'ನಾಳೆ ತಂದು ಒಪ್ಪಿಸುತ್ತೇನೆ' ಎಂದು ಕೈಮುಗಿದು ಮಲಗುವಂತೆ ಹೇಳಿದರು. ಮರುದಿನವೇ ಬಂದು ದೇವಸ್ಥಾನದ ದ್ವಾರಮಂಟಪಕ್ಕೆ ಬೇಕಾದ ಎರಡು ಕಳಸಗಳನ್ನು ಒಪ್ಪಿಸಿದರು.



## ಅಡಿಟಿಪ್ಪಣಿಗಳು

೧. ಆರ್.ಎಫ್. ಕಿಟೆಲ್. ಕನ್ನಡ ಇಂಗ್ಲೀಷ್ ಡಿಕ್ಷನರಿ, ಪುಟ. ೧೬೨೯

೨. ವೀರಣ್ಣ ದಂಡೆ. ಕನ್ನಡ ಜಾನಪದ ಪ್ರಜ್ಞೆ, ಪುಟ. ೩೧೧-೧೧೬

೩. ಮೈಲಹಳ್ಳಿ ರೇವಣ್ಣ. ಜನಪದರು ಕಂಡ ಹನುಮಂತ, ಲಕ್ಷಣ್ ತೆಲಗಾವಿ. ಸಂಶೋಧನೆ (ಸಂ.) ಪುಟ. ೪೨೧-೪೨೪

೪. ಡಾ.ಹೆಚ್.ಜೆ. ಲಕ್ಕಪ್ಪಗೌಡ. ಜಾನಪದ ಕೈಪಿಡಿ, (ಸಂ) ಪುಟ. ೨೬-೩೬

೫. ಕೆ. ಪ್ರಹ್ಲಾದಾಚಾರ್ಯ. ಕಡಲಬಾಳುರಾಯರಚರಿತ್ರೆ, ಪುಟ. ೮-೧೦

೬. ಅದೇ. ಪುಟ. ೧೦೨-೧೦೭

೭. ಅದೇ. ಪುಟ. ೧೧೪

೮. ಕರ್ನಾಟಕ ದೇವಾಲಯಗಳ ಕೋಶ ಬಳ್ಳಾರಿ ಜಿಲ್ಲೆ, (ಸಂ) ಪುಟ. ೨೭೨

೯. ರಾಜಶೇಖರ ಜಮದಂಡಿ. ಹೊಸೂರಮ್ಮ-ಸಾಂಸ್ಕೃತಿಕ ಅಧ್ಯಯನ, ಪುಟ. ೫೯

# ಅಧ್ಯಾಯ ನಾಲ್ಕು

## ಆಚರಣೆಗಳು

೪.೧ : ಜೀವನಾವರ್ತನ ಆಚರಣೆಗಳು

೪.೨ : ವಾರ್ಷಿಕಾವರ್ತನ ಆಚರಣೆಗಳು

೪.೩ : ಆಂಜನೇಯಸ್ವಾಮಿಯ ಉಡುಗೆ-ತೊಡುಗೆಗಳು

೪.೪ : ಜಾತ್ರೆಯಲ್ಲಿನ ಪ್ರದರ್ಶಕ ಕಲೆಗಳು

# ಅಧ್ಯಾಯ ೪

# ಆಚರಣೆಗಳು

ಮನುಷ್ಯ ಅಗೋಚರವಾದ ದೈವಶಕ್ತಿಗಳ ಪ್ರೀತ್ಯರ್ಥವಾಗಿ ನಡೆಸುವ ಮತಾಚಾರಗಳು ಮತ್ತು ಕರ್ಮವಿಧಿಗಳನ್ನು ಆಚರಣೆಗಳೆಂದು ಕರೆಯುತ್ತಾರೆ. ಈ ಆಚರಣೆಗಳನ್ನು ಪರಂಪರಾಗತವಾಗಿ ಮುಂದು ವರಿಸಿಕೊಂಡು ಬರುವುದರಿಂದ ಇವುಗಳ ಹಿನ್ನಲೆಯಲ್ಲಿ ಬಲವಾದ ನಂಬಿಕೆಗಳು ಇರುತ್ತವೆ. ಆಚರಣೆಗಳು ಧಾರ್ಮಿಕ ವಲಯದಲ್ಲಿರುವದೇ ಹೆಚ್ಚು. ಈ ಬಗೆಯ ಆಚರಣೆಗಳನ್ನು ಅನುಷ್ಠಾನಕ್ಕೆ ತಂದರೆ ತಾನು ನಂಬಿದ ಅಗೋಚರ ಅಥವಾ ಪವಿತ್ರ ವಸ್ತುಗಳಿಗೆ ತನ್ನ ಮೇಲೆ ಪ್ರೀತಿ ಉಂಟಾಗುತ್ತದೆಯೆಂದು ಅವನ ನಂಬಿಕೆ. ನಂಬಿಕೆ ಮತ್ತು ಆಚರಣೆಗಳು ಒಟ್ಟೊಟ್ಟಿಗೆ ಇದ್ದರೂ ಕೂಡ ಕೆಲವು ವೇಳೆ ಗೊತ್ತಿಲ್ಲದಂತೆಯೇ ಅವೆರಡಕ್ಕೂ ಸಂಬಂಧವೇ ಇಲ್ಲದಂತಹ ಸಂದರ್ಭಬರಬಹುದು. ಪಾವಿತ್ರ್ಯತೆ, ಅಗೋಚರ ಶಕ್ತಿಗಳ ಬಗೆಗಿರುವ ಭಯದ ಕಾರಣಕ್ಕಾಗಿ ಆಚರಣೆಗಳನ್ನು ಭಕ್ತಿ ಶ್ರದ್ಧೆಗಳಿಂದ ನಡೆಸಲಾಗುವುದು.

ಆಚರಣೆಗಳನ್ನು ೧. ಧಾರ್ಮಿಕ ಆಚರಣೆ ೨. ಮಾಂತ್ರಿಕ ಆಚರಣೆ ೩. ಮಾಟ, ಮೋಡಿ ಹೀಗೆ ಮೂರು ವಿಭಾಗಗಳಲ್ಲಿ ಹಿಡಿದಿಡುವ ಪ್ರಯತ್ನವನ್ನು ಮಾನವ ಶಾಸ್ತ್ರಜ್ಞರು ಮಾಡಿದ್ದಾರೆ.[೧]

"ತಲೆ ತಲಾಂತರದಿಂದ ಸಮುದಾಯದ ಅಂಗೀಕಾರವನ್ನು ಪಡೆದು ಬಳಕೆಯಲ್ಲಿರುವ ಮಾಟ ಮತ್ತು ಧಾರ್ಮಿಕ ವಿಧಿಗಳೇ ಜಾನಪದ ಆಚರಣೆಗಳು"

ಒಬ್ಬ ವ್ಯಕ್ತಿ ಇಷ್ಟಪಟ್ಟು ಒಂದು ಆಚರಣೆಯನ್ನು ಸೃಷ್ಟಿ ಮಾಡಲು ಸಾಧ್ಯವಿಲ್ಲ. ಒಂದು ಜನಾಂಗದ ಜೀವನ ವಿಧಾನದ ಬೇಡಿಕೆಯ ಅಂಗವಾಗಿ ಆಚರಣೆ ರೂಪು ಪಡೆಯುತ್ತದೆ. ಪ್ರಕೃತಿಯಲ್ಲಿ ಮತ್ತು ಮಾನವನ ದೇಹದಲ್ಲಿ ಉಂಟಾಗುವ ಬದಲಾವಣೆಯನ್ನು ಆಚರಣೆಗಳ ಮೂಲಕ ಗುರುತಿಸಲಾಗುತ್ತದೆ. ಮಾನವನ ಬದುಕಿಗೆ ಮತ್ತು ಅವನ ಭಾವ ಪ್ರಪಂಚಕ್ಕೆ ಸಂಬಂಧಿಸಿದ ಆಚರಣೆಗಳು, ನೈಸರ್ಗಿಕ ಕ್ರಿಯೆಗಳಿಗೆ ಸಂಬಂಧಿಸಿದ ಆಚರಣೆಗಳು, ಆರ್ಥಿಕ ಚಟುವಟಿಕೆಗಳಿಗೆ ಸಂಬಂಧಿಸಿದ ಹಾಗೂ ಸಾಮಾಜಿಕ ರಚನೆಗಳಿಗೆ ಸಂಬಂಧಿಸಿದ ಆಚರಣೆಗಳೆಂದು ಇವನ್ನು ಸ್ಥೂಲವಾಗಿ ವಿಂಗಡಿಸಬಹುದು. ಮನುಷ್ಯನ ಮನಸ್ಸಿನ ಪರಿವರ್ತನೆಯ ಬಗೆ ಬಗೆಯ ವಿನ್ಯಾಸಗಳನ್ನು ಆಚರಣೆಗಳು ವ್ಯಕ್ತಗೊಳಿಸುತ್ತವೆ.

ದೈವಸಂಬಂಧದ ಆಚರಣೆಗಳು ಜಾನಪದ ಬದುಕಿನ ಹೆಚ್ಚು ಭಾಗವನ್ನು ಆಕ್ರಮಿಸಿವೆ. ದಿನಕ್ಕೊಂದು ಸಾರಿ, ವಾರಕ್ಕೊಂದು ಸಾರಿ, ತಿಂಗಳಿಗೊಂದು ಸಾರಿ, ಒಂದು ದೇವರ ಆರಾಧನೆ ಆಗುತ್ತದೆ.

ಸಕಲ ಪೂರ್ವಸಿದ್ಧತೆಯೊಂದಿಗೆ ಆಗುವ ಹಬ್ಬಗಳು ಅನೇಕ ಆಚರಣೆಗಳ ಮೊತ್ತವಾಗಿವೆ.[೨]

ಒಂದು ದಿನದಲ್ಲಿ ಆಚರಿಸುವ ಆಚರಣೆಗಳನ್ನು 'ದೈನಿಕಾವರ್ತನ' ಆಚರಣೆಗಳೆಂದೂ, ಮನುಷ್ಯ ಹುಟ್ಟಿದಾಗಿನಿಂದ ಸಾಯುವವರೆಗೆ ಅವನಿಗೆ ಸಂಬಂಧಿಸಿದಂತೆ ಮಾಡುವ ಆಚರಣೆಗಳನ್ನು 'ಜೀವನಾವರ್ತನ' ಆಚರಣೆಗಳೆಂದೂ, ಒಂದು ವರ್ಷದ ಅವಧಿಯಲ್ಲಿ ಆಚರಿಸುವ ಪ್ರಮುಖ ಆಚರಣೆಗಳನ್ನು 'ವಾರ್ಷಿಕಾವರ್ತನ' ಆಚರಣೆಗಳೆಂದೂ ಕರೆಯುತ್ತಾರೆ. ಈ ಆಚರಣೆಗಳನ್ನು ಕಡಲಬಾಳು ಗ್ರಾಮದಲ್ಲಿ ಹಿಂದುಳಿದ ವರ್ಗದರಾದ ನಾಯಕರು, ಹರಿಜನರು, ಚಲವಾದಿಯವರು, ಕುರುಬರು, ಪದ್ಮಶಾಲಿಯವರು, ಮಡಿವಾಳರು, ಬೆಸ್ತರು, ಬಾರಿಕರು ಮುಂತಾದ ಜಾತಿಯವರು ಆಚರಿಸುತ್ತಾರೆ.

### ೪.೧. ಜೀವನಾವರ್ತನ ಆಚರಣೆಗಳು

೧. **ಜನನದ ಸಂದರ್ಭ :** ಮಗು ಜನನವಾದಾಗ ಮನೆಯವರು ಹದಿನಾರನೇ ದಿನದಲ್ಲಿ ಮಗುವನ್ನು ಆಂಜನೇಯನ ದೇವಸ್ಥಾನಕ್ಕೆ ಕರೆದುಕೊಂಡು ಹೋಗುತ್ತಾರೆ. ಹೋಗುವಾಗ ಒಂದು ತಟ್ಟೆಯಲ್ಲಿ ಅಕ್ಕಿ, ಬ್ಯಾಳಿ, ಬೆಲ್ಲ, ಕೊಬರಿಬಟ್ಟಲು, ಎಲೆ, ಅಡಿಕೆ, ಕಾಯಿ (ಉಲುಪಿ) ತೆಗೆದುಕೊಂಡು ಹೋಗುತ್ತಾರೆ. ಇವುಗಳನ್ನು ಪೂಜಾರಿಗೆ ಕೊಡುತ್ತಾರೆ. ಮಂಗಳಾರತಿ ಮಾಡಿದ ನಂತರ ಪೂಜಾರಿ ಮಗುವಿಗೆ ಮೊದಲು ಮನೆದೇವರ ಹೆಸರಿನಿಂದ ಕರೆದು, ನಂತರ ಮನೆಯವರಿಗೆ ಇಷ್ಟವಾದ ಹೆಸರಿನಿಂದ ಕರೆಯುತ್ತಾನೆ. ಈ ರೀತಿ ಮಗುವಿನ ನಾಮಕರಣ ಆದನಂತರ ಮನೆಯವರು ಮನೆಗೆ ಹಿಂತಿರುಗುತ್ತಾರೆ.

೨. **ಮೈನೆರೆತ ಸಂದರ್ಭ :** ಮೈನೆರೆತ ಹುಡುಗಿಯನ್ನು ಒಂಬತ್ತು, ಹನ್ನೊಂದು ಅಥವಾ ಹದಿನಾರನೇ ದಿವಸದಲ್ಲಿ ವಾದ್ಯಗಳ ಸಮೇತ ಆಂಜನೇಯನ ದೇವಸ್ಥಾನಕ್ಕೆ ಕರೆದುಕೊಂಡು ಹೋಗುತ್ತಾರೆ. ದೇವರಿಗೆ ನೈವೇದ್ಯ ಮತ್ತು ಉಡಿ ತುಂಬುವ ಸಾಮಾನುಗಳನ್ನು ತಂದಿರುತ್ತಾರೆ. ಉಡಿ ತುಂಬುವ ಸಾಮಾನುಗಳನ್ನು ಪೂಜಾರಿಗೆ ಕೊಟ್ಟು ಆಂಜನೇಯನಿಗೆ ನೈವೇದ್ಯ ಅರ್ಪಿಸಿ ಮಂಗಳಾರತಿ ಮಾಡಿಸಿಕೊಂಡು ಮನೆಗೆ ಹಿಂದಿರುಗುತ್ತಾರೆ.

೩. **ಮುದ್ರೆ ಹಾಕುವ ಸಂದರ್ಭ :** ಇಲ್ಲಿ ವಿಶೇಷವಾಗಿ ಚಿಕ್ಕ ಬಾಲಕರಿಗೆ ಮುದ್ರೆಯನ್ನು ಹಾಕುತ್ತಾರೆ. ಮದುವೆಗೆ ಮುಂಚಿತವಾಗಿ ಮದ್ರೆ ಹಾಕಿಸಿಕೊಳ್ಳುವ ಪದ್ಧತಿ ನಾಯಕ ಜನಾಂಗದಲ್ಲಿ ಇದೆ. ಆಂಜನೇಯನ ದೇವಸ್ಥಾನದಲ್ಲಿ ಪೂಜಾರಿಯೇ ಈ ಮುದ್ರೆಗಳನ್ನು ಹಾಕುತ್ತಾನೆ. ಸಾಮಾನ್ಯವಾಗಿ ಚಿಕ್ಕ ಮಕ್ಕಳಿರುವಾಗ ಮುದ್ರೆ ಹಾಕಿಸುತ್ತಾರೆ. ಮುದ್ರೆ ಹಾಕಿಸಿಕೊಳ್ಳುವ ಮನೆಯವರು ವಾದ್ಯಗಳ ಸಮೇತ ಮುದ್ರೆ ಹಾಕಿಸಿಕೊಳ್ಳುವವರೊಂದಿಗೆ ಈ ಕೆಳಕಂಡ ಸಾಮಾನುಗಳನ್ನು ತೆಗೆದುಕೊಂಡು ಹೋಗುತ್ತಾರೆ. ಐದು ಸೇರು ಅಕ್ಕಿ, ಐದು ಕಾಯಿ, ಐದು ಬೆಟ್ಟಡಕಿ, ಐದು ಉತ್ತುತ್ತಿಹಣ್ಣು, ಐದು ಕರಿಬಂಟ (ಕೇರಳ್ಳು) ಐದು ಕೊಬರಿಬಟ್ಟಲು, ಐದು ಹರಿಷಣಕೊಂಬು, ಐದು ಪಾವಲಿ (ಇಪ್ಪತ್ತೈದುಪೈಸೆ) ಒಂದು ತಾಳೆಗರಿ, ಒಂದು ಮಣ್ಣಿನ ಮುಚ್ಚಳ, ಒಂದು ಬೀಸಣಿಕೆ ಮತ್ತು ಉಲುಪಿ.

ನಂತರ ಐದು ಮೂಲೆಗೂ ನೀರು ತುಂಬಿದ ಐದು ತಂಬಿಗೆಗಳನ್ನಿಟ್ಟು ಐದು ಮೂಲೆಗೂ ಐದು ಪಂಚಕಳಸ ಇಡುತ್ತಾರೆ. ಆ ಮೇಲೆ ಅಕ್ಕಿ ಹಾಕಿ ಗದ್ದುಗೆ ಮಾಡಿ ಸುರುಗಿ ಸುತ್ತುತ್ತಾರೆ. ಮುದ್ರೆಯನ್ನು

ಎಷ್ಟು ಜನ ಹಾಕಿಸಿಕೊಳ್ಳುತ್ತಾರೋ ಅಷ್ಟು ಗೋಪಾಳ (ಭಿಕ್ಷೆ ಬೇಡಲು ಹಿಡಿಯುವ ಸೇರಿನ ಆಕಾರದ ಬಿದರಿನಬುಟ್ಟಿ)ಗಳನ್ನು ತಂದಿರುತ್ತಾರೆ. ಮುದ್ರೆ ಹಾಕಿಸಿಕೊಳ್ಳುವರು ಹೊಸ ಬಟ್ಟೆ ಧರಿಸುತ್ತಾರೆ. ಮುದ್ರೆ ಹಾಕುವ ಕಾರ್ಯಕರ್ತರಲ್ಲಿ ಕಟ್ಟಿಮನೆ (ಬಂಡೇರು ಮನೆತನದವರು) ಕೊಂಡಿಕಾರ (ತಳವಾರು ಮನೆತನದವರು) ಸ್ವಾಮಿರಾಯ (ಪೂಜಾರಿ) ಮತ್ತು ಊರಿನ ದೈವಸ್ಥರ ಪೈಕಿ ಒಬ್ಬರು ಇರುತ್ತಾರೆ. ಮುದ್ರೆ ಹಾಕುವ ಪೂಜಾ ದಕ್ಷಿಣೆ ಗುರುವಿಗೆ ೨೫ರೂ. ಸ್ವಾಮಿರಾಯನಿಗೆ ೨೫ರೂ. ಕಟ್ಟಿಮನೆಗೆ ೨೫ರೂ, ಕೊಂಡಿಕಾರನಿಗೆ ೨೫ರೂ ಒಟ್ಟು ೧೦೦ರೂ ಕೊಡಬೇಕು. ನಂತರ ಬೆಂಕಿಕೆಂಡದಲ್ಲಿ ತಾಮ್ರದ ಮುದ್ರೆಗಳಾದ ಶಂಖ ಮತ್ತು ಚಕ್ರವನ್ನು ಕಾಯಿಸಿ ತೋಳಿನ ಮೇಲ್ಭಾಗದಲ್ಲಿ ಎಡಕ್ಕೆ ಶಂಖ ಮತ್ತು ಬಲಕ್ಕೆ ಚಕ್ರದ ಮುದ್ರೆಗಳನ್ನು ಒತ್ತುತ್ತಾರೆ. ಮುದ್ರೆ ಹಾಕಿಸಿಕೊಂಡ ನಂತರ ಮನೆಗೆ ತೆರಳುತ್ತಾರೆ. ಮರುದಿನ ಮುದ್ರೆ ಹಾಕಿಸಿಕೊಂಡವರು ಐದು ದಿನಗಳ ಕಾಲ ಊರಿನಲ್ಲಿ ಭಿಕ್ಷಾಟನೆಗೆ ಹೊರಡುತ್ತಾರೆ.

ಮುದ್ರೆ ಹಾಕಿಸಿಕೊಳ್ಳದವರು ಮದುವೆ ಆಗುವಂತಿಲ್ಲ. ಮುದ್ರೆ ಹಾಕಿಸಿಕೊಂಡವರಿಗೆ ಸಮಾಜದಲ್ಲಿ ಗುರುವಿನ ಸ್ಥಾನ ಕೊಡುತ್ತಾರೆ ಮತ್ತು ದಾಸೋಗಕ್ಕೆ ಕರೆಯುತ್ತಾರೆ. ಮುದ್ರೆ ಹಾಕಿಸಿ ಕೊಂಡವರ ಶವಸಂಸ್ಕಾರ ಪದ್ಧತಿಯಲ್ಲಿಯೂ ಸಹ ವ್ಯತ್ಯಾಸವಿದೆ. ಮುದ್ರೆ ಹಾಕಿಸಿಕೊಂಡವರನ್ನು ಹೂಳುವುದಿಲ್ಲ ಬದಲಾಗಿ ಅವರನ್ನು ಸುಡುತ್ತಾರೆ.

**೪. ಮದುವೆ ಸಂದರ್ಭ :** ಮದುವೆ ಕಾರ್ಯಕ್ಕೆ ಬೀಗರು ಊರಿಗೆ ಬಂದರೆ ಮೊದಲು ಇಳಿದುಕೊಳ್ಳುವುದು ಹನುಮಂತನ ಗುಡಿಯಲ್ಲಿ. ಅಲ್ಲಿಯೇ ಬೀಗರ ಮೊದಲ ಭೇಟೆ ನಡೆಯುತ್ತದೆ. ನಂತರ ಮಾರುತಿಗೆ ಮಂಗಳಾರತಿ ಮಾಡಿಸಿಕೊಂಡು ಅವರನ್ನು ವಾದ್ಯಗಳ ಸಮೇತ ಮದುವೆ ಮನೆಗೆ ಕರೆದುಕೊಂಡು ಹೋಗುತ್ತಾರೆ.

ಮದುವೆಯ ದಿನ ಮೊದಲಿಗೆ ಆಂಜನೇಯನಿಗೆ ಎಣ್ಣೆ ಹಾಕುತ್ತಾರೆ. ಮದುವೆಯ ಮನೆಯ ಮುಂದೆ ನೆಡುವ ಹಸಿರುಕಂಬ ಮತ್ತು ಹಾಲುಕಂಬವನ್ನು ಇಲ್ಲಿಂದಲೇ ತೆಗೆದುಕೊಂಡು ಹೋಗುತ್ತಾರೆ ಮತ್ತು ಮದುವೆಗೆ ಬೇಕಾದ ಐರಾಣಿಯನ್ನು ಕುಂಬಾರರು ಮೊದಲು ದೇವಸ್ಥಾನದಲ್ಲಿ ತಂದು ಇಟ್ಟಿರುತ್ತಾರೆ. ನಂತರ ಮದುವೆ ಮನೆಯವರು ವಾದ್ಯಗಳ ಸಮೇತ ಇಲ್ಲಿಗೆ ಬಂದು ಕುಂಬಾರರಿಗೆ ಕಾಣಿಕೆ ಸಲ್ಲಿಸಿ ಅವುಗಳನ್ನು ತೆಗೆದುಕೊಂಡು ಹೋಗುತ್ತಾರೆ ಮತ್ತು ತಾಳಿಕಟ್ಟುವುದಕ್ಕಿಂತ ಮುಂಚಿತವಾಗಿ ಮದುಮಗ ಎತ್ತಿನ ಮೇಲೆ ದೇವಸ್ಥಾನಕ್ಕೆ ಬಂದು ಆಂಜನೇಯನ ದರ್ಶನ ಪಡೆದು ಮಂಗಳಾರತಿ ಮಾಡಿಸಿಕೊಂಡು ಹೋದನಂತರ ತಾಳಿಕಟ್ಟುತ್ತಾನೆ.

**೫. ಸೀಮಂತದ ಸಂದರ್ಭ :** ಎಂಟು ತಿಂಗಳು ತುಂಬಿದ ಗರ್ಭಿಣಿ ಹೆಣ್ಣು ಮಗಳನ್ನು ಮನೆಯವರು ಆಂಜನೇಯನ ದೇವಸ್ಥಾನಕ್ಕೆ ಕರೆದುಕೊಂಡು ಬರುತ್ತಾರೆ. ಅಲ್ಲಿ ಅವರು ಆಂಜನೇಯನಿಗೆ

ಕಾಯಿ,ಕರ್ಪೂರ ಮಾಡಿಸಿಕೊಂಡು ನೈವೇದ್ಯ ಅರ್ಪಿಸಿ ಪೂಜಾರಿಗೆ ಕಾಣಿಕೆ ಸಲ್ಲಿಸಿ ಮಂಗಳಾರತಿ ತೆಗೆದುಕೊಂಡು ಮನೆಗೆ ಮರಳುತ್ತಾರೆ.

೬. ಚೊಚ್ಚಲು ಹೆರಿಗೆಯ ತೊಟ್ಟಿಲ ಸಂದರ್ಭ : ಬೇರೆ ಊರಿನಿಂದ ತೊಟ್ಟಿಲು ತೆಗೆದುಕೊಂಡು ಬಂದವರು ಮೊದಲಿಗೆ ಆಂಜನೇಯನ ದೇವಸ್ಥಾನದಲ್ಲಿಯೇ ಉಳಿದು ಕೊಂಡಿರುತ್ತಾರೆ. ಗಂಡಿನ ಮನೆಯವರು ವಾದ್ಯಗಳ ಜೊತೆ ಕಳಸ ತೆಗೆದುಕೊಂಡು ಬಂದು ಮಗುವಿಗೆ ಮೊದಲು ಮನೆದೇವರ ಹೆಸರಿನಿಂದ ಪೂಜಾರಿಯಿಂದ ಕರೆಯಿಸಿಕೊಂಡ ನಂತರ ತಮಗೆ ಇಷ್ಟವಾದ ಹೆಸರಿನಿಂದ ನಾಮಕರಣ ಮಾಡಿಸಿ, ಮಂಗಳಾರತಿ ಮಾಡಿಸಿಕೊಂಡು ಮನೆಗೆ ಹೋಗುತ್ತಾರೆ.

೭. ಸಾವಿನ ಸಂದರ್ಭ : ಊರಲ್ಲಿ ಯಾರಾದರೂ ಮರಣ ಹೊಂದಿದಾಗ ಅವರ ಅಂತಿಮ ಸಂಸ್ಕಾರ ಆಗುವವರೆಗೆ ಆಂಜನೇಯನ ಪೂಜೆ ಮಾಡುವುದಿಲ್ಲ. ಅಂತಿಮಸಂಸ್ಕಾರ ಮಾಡಿದ ನಂತರ ಪೂಜೆ ಮಾಡುತ್ತಾರೆ. ಶವಸಂಸ್ಕಾರಕ್ಕೆ ಹೋಗಿ ಬಂದವರು ಸ್ನಾನ ಮಾಡಿ ದೇವಸ್ಥಾನಕ್ಕೆ ಬಂದು ಪ್ರದಕ್ಷಿಣೆ ಹಾಕಿ ನಮಸ್ಕರಿಸಿ ಹೋಗುತ್ತಾರೆ. ಗುಡಿಗೆ ಹೋಗಿ ಬಂದರೆ ಮನೆಯಲ್ಲಿ ಯಾವುದೆ ತೊಂದರೆಯಾಗುವುದಿಲ್ಲ ಮತ್ತು ದೋಷ ಬರುವುದಿಲ್ಲ ಎಂಬ ನಂಬಿಕೆ ನಮ್ಮ ಜನಪದರಲ್ಲಿದೆ.

ಹೀಗೆ ಹನುಮಂತನು ನಮ್ಮ ದಿನ ನಿತ್ಯದ ಜೀವನ, ಸಂಸ್ಕೃತಿಯೊಂದಿಗೆ ತನ್ನ ಸಂಬಂಧವನ್ನು ಗಟ್ಟಿಗೊಳಿಸಿಕೊಳ್ಳುತ್ತಾ ಬಂದಿದ್ದಾನೆ.

### ೪.೨. ವಾರ್ಷಿಕಾವರ್ತನ ಆಚರಣೆಗಳು

ಪುರಾತನ ಕಾಲದಿಂದಲೂ ಆಂಜನೇಯನ ನಿತ್ಯ ಪೂಜೆಯನ್ನು ನಾಯಕರ ಒಂದು ಪ್ರಮುಖ ಮನೆತನದವರಾದ ಪೂಜಾರರು ಮಾಡುತ್ತಾರೆ. ಒಂದು ವರ್ಷದ ಅವಧಿಗೆ ಒಬ್ಬೊಬ್ಬ ಪ್ರಮುಖ ಪೂಜಾರು ಮನೆಯವರು ಮಾಡುತ್ತಾರೆ. ಪೂಜೆ ಮಾಡುವವರು ವರ್ಷದಿಂದ ವರ್ಷಕ್ಕೆ ಬದಲಾಗುತ್ತಿರುತ್ತಾರೆ. ವಿಶೇಷ ಸಂದರ್ಭದಲ್ಲಿ ವೈದಿಕರು ಮಾಡುತ್ತಾರೆ.

೧. ದಿನಂ ಪ್ರತಿ : ದಿನಂ ಪ್ರತಿ ಬೆಳಿಗ್ಗೆ ಏಳು ಗಂಟೆಗೆ ಆಂಜನೇಯ ಪೂಜೆ ಮಾಡುತ್ತಾರೆ. ಆಂಜನೇಯನ ಪೂಜಾರಿ ಸ್ನಾನ ಮಾಡಿ ಶುದ್ಧವಾದ ಮಡಿ ನೀರನ್ನು ತೆಗೆದುಕೊಂಡು ಬಂದು ಆಂಜನೇಯನ ಮೂರ್ತಿಯನ್ನು ತೊಳೆದು ನಂತರ ಗಂಧ, ಅಕ್ಷತೆ, ಕುಂಕುಮ, ಹೂವು, ಪತ್ರಿಯಿಂದ ಅಲಂಕರಿಸುತ್ತಾನೆ. ಪೂಜೆಯ ನೈವೇದ್ಯಕ್ಕೆ ಕಲ್ಲುಸಕ್ಕರೆ ಪ್ರಸಾದವನ್ನಿಡುತ್ತಾನೆ. ಪೂಜಾ ಸಂದರ್ಭದಲ್ಲಿ ಉತ್ತುತ್ತಿ ಅಥವಾ ಕಾಯಿ ಒಡೆಯುತ್ತಾನೆ.

೨. ವಾರದ ವಿಶೇಷದಿನ (ಶನಿವಾರ) : ಅಂದು ಬೆಳಿಗ್ಗೆ ಐದು ಗಂಟೆಗೆ ಆಂಜನೇಯನ ಪೂಜೆಯನ್ನು ಮಾಡುತ್ತಾರೆ. ಪುನಃ ಸಾಯಂಕಾಲ ಐದು ಗಂಟೆಗೆ ಪೂಜಾರಿ ಸ್ನಾನ ಮಾಡಿ

ಆಂಜನೇಯನಿಗೂ ಸ್ನಾನ ಮಾಡಿಸಿ ಪೂಜೆ ಮಾಡುತ್ತಾನೆ. ಅಂದು ಎರಡು ಸಲ ಪೂಜೆ ಮಾಡುತ್ತಾರೆ. ಹನುಮಂತನಿಗೆ ಶನಿವಾರ ವಿಶೇಷದಿನ. ಅಂದು ಆತನ ಭಕ್ತರು ಸಂಧ್ಯಾ ವಂದನೆ ಸಲ್ಲಿಸಿ ಮಡಿಉಟ್ಟು ಭಯ ಭಕ್ತಿಯಿಂದ ವ್ರತ ಆಚರಿಸುತ್ತಾರೆ. ಆತನ ಮನ ಒಲಿಸಿಕೊಳ್ಳುವುದಕ್ಕಾಗಿ ಒಂದು ಹೊತ್ತು ಉಪವಾಸವನ್ನು ಸಹ ಆಚರಿಸುತ್ತಾರೆ.

ರಾತ್ರಿ ಎಂಟು ಗಂಟೆಗೆ ಡೊಳ್ಳು, ಸನಾಯಿಯೊಂದಿಗೆ ಆಂಜನೇಯನ ಪಾಲಕಿ ಉತ್ಸವ ನಡೆಯುತ್ತದೆ. ಪಾಲಕಿ ಉತ್ಸವದ ಮುಂದೆ ಬಾರಿಕರು ದೀಪದ ಪಂಜನ್ನು ಹಿಡಿದಿರುತ್ತಾರೆ. ಪಾಲಕಿ ಜೊತೆಯಲ್ಲಿ ಪೂಜಾರಿ, ದಾಸಯ್ಯ, ಪವಾಡ ಮಾಡುವ ಬಾಳಪ್ಪ ಮತ್ತು ಸ್ವಾಮಿಯ ಭಕ್ತರು ಇರುತ್ತಾರೆ. ಪಾಲಕಿ ಉತ್ಸವವು ಮೂರು ಸುತ್ತು ದೇವಸ್ಥಾನ ಪ್ರದಕ್ಷಿಣೆ ಹಾಕಿದನಂತರ ಮಂಗಳಾರತಿ ಮಾಡುತ್ತಾರೆ. ಅಂದು ಬೇಡಿಕೊಂಡ ಭಕ್ತರು ಕುಂಕುಮ ಪೂಜೆ, ಎಲೆ ಪೂಜೆಯನ್ನು ಮಾಡಿಸಿರುತ್ತಾರೆ. ಅಂದು ಊರಿನ ಪ್ರತಿಯೊಂದು ಮತದವರೂ ದೇವಸ್ಥಾನಕ್ಕೆ ಬಂದು ಸ್ವಾಮಿಯ ದರ್ಶನವನ್ನು ಪಡೆದುಕೊಂಡು ಹೋಗುತ್ತಾರೆ.

೩. ಅಮವಾಸೆ : ಈ ದಿನ ಹರಕೆ ತೀರಿಸುವುದಾಗಿ ಒಪ್ಪಿಕೊಂಡ ಭಕ್ತರು ಆಂಜನೇಯನಿಗೆ, ಕುಂಕುಮಪೂಜೆ, ಎಲೆಪೂಜೆ ಮಾಡಿಸಿ ಹೂವಿನಿಂದ ಅಲಂಕೃತಗೊಳಿಸಿರುತ್ತಾರೆ. ಅಮವಾಸೆ ದಿನ ಪರಸ್ಥಳದ ಭಕ್ತರು ಸಹ ಬರುತ್ತಾರೆ. ಬೇಡಿಕೊಂಡವರು ಕಾಲ್ನಡಿಗೆಯಲ್ಲಿಯೇ ಸ್ವಾಮಿಯ ದರ್ಶನಕ್ಕೆ ಬಂದಿರುತ್ತಾರೆ. ಬೇರೆ ದಿನಗಳಿಗಿಂತ ಈ ದಿನದಲ್ಲಿ ಬರುವ ಭಕ್ತರ ಸಂಖ್ಯೆ ಹೆಚ್ಚಾಗಿರುತ್ತದೆ.

೪. ಜಾತ್ರೆ : ನಿಘಂಟುಗಳ ಪ್ರಕಾರ 'ಜಾತ್ರೆ' ಅಂದರೆ 'ಯಾತ್ರೆ'ಯ ತದ್ಭವ ರೂಪ. ಮನುಷ್ಯ ಪ್ರಾಣಿಯು ಈ ಸೃಷ್ಟಿಯಲ್ಲಿ ಬದಲಾಗುವ ಸನ್ನಿವೇಶಗಳಾದ ಹಗಲು-ರಾತ್ರಿ, ಬಿಸಿಲು-ಗಾಳಿಗಳ ಈ ಬದಲಾವಣೆಗಳನ್ನು ನೋಡಿ ಕಣ್ಣಿಗೆ ಕಾಣದ ಅಗೋಚರವಾದ ಈ ಶಕ್ತಿಯನ್ನು ಕಂಡು ಕೆಲವೊಮ್ಮೆ ಭೀತಿಗೊಳಗಾದರೆ, ಮತ್ತೊಮ್ಮೆ ಭಕ್ತಿಯಿಂದ ತಲೆಬಾಗತೊಡಗಿದ. ಈ ಭೀತಿಯ ನಿವಾರಣೆಗಾಗಿ ದೇವರ ಕಲ್ಪನೆ ತಂದುಕೊಂಡು ಧಾರ್ಮಿಕ ಭಾವನೆಯಲ್ಲಿ ಗುಂಪು ಗುಂಪಾಗಿ ಜನರೊಡಗೂಡಿ ದೇವರನ್ನು ಆರಾಧಿಸಲು ಮುಂದಾದನು. ನಂತರ ವರ್ಷಕ್ಕೊಂದಾವರ್ತಿ ವಿಶೇಷ ಉತ್ಸವ ಮಾಡಲು ಅನುವಾದಾಗ 'ಜಾತ್ರೆ' ಎಂಬುದು ಹುಟ್ಟಿಕೊಂಡಿತು.

"ಜಾತ್ರೆಯೆಂಬುದು ವರ್ಷಕ್ಕೊ, ನಿಗದಿಯಾದ ಇನ್ನಿತರ ಅವಧಿಗೊ, ಗೊತ್ತಾದ ಸ್ಥಳದಲ್ಲಿ ಒಂದು ದಿನವೊ ಇನ್ನೂ ಹೆಚ್ಚಿನ ದಿನಗಳವರೆಗೂ ಜನಸೇರಿ ನಡೆಸುವ ಉತ್ಸವವಾಗಿದೆ."

ಜಾತ್ರೆಗಳು ನಮ್ಮ ನಾಡಿನಲ್ಲಿ ಜರುಗುವ ಸ್ಥಳದ ಹೆಸರಿನಿಂದ ಅಥವಾ ಅಲ್ಲಿಯ ದೈವದ ಹೆಸರಿನಿಂದ ಜನಪ್ರಿಯವಾಗಿರುವುದುಂಟು. ಜಾತ್ರೆಗಳು ಸಮಸ್ತ ಸಾಮಾಜಿಕ ಪರಂಪರೆಯ ಅಭಿವ್ಯಕ್ತಿಯಾಗಿರುವ ಜಾನಪದರ ಅನೇಕ ಅಂಶಗಳನ್ನು ಒಳಗೊಂಡಿರುವಂಥವು. ಜಾತ್ರೆಯ ಹೆಸರಿನಲ್ಲಿ ನಡೆಯುವ ಸಂಕೀರ್ಣ ಸ್ವರೂಪದ ಚಟುವಟಿಕೆಗಳೆಲ್ಲ ಸಾಮೂಹಿಕವಾಗಿ ನಡೆಯುವಂಥವು. ಯಾವುದೋ ಒಂದು ನಿಗಧಿಯಾದ

ವೇಳೆಯಲ್ಲಿ ಜನರೆಲ್ಲಾ ಸೇರಿ ದೇವರನ್ನು ಆರಾಧಿಸುವುದಕ್ಕೆ 'ಜಾತ್ರೆ' ಎಂದು ಕರೆಯುತ್ತಾ ಬಂದಿದ್ದೇವೆ. ಈ ಆರಾಧನೆಯ ಹಿನ್ನಲೆಯಲ್ಲಿ ಜನ ಒಂದು ಕಡೆ ಸೇರುವಂತಾಗುತ್ತದೆ. ಇದರೊಂದಿಗೆ ಉಳಿದ ವ್ಯವಹಾರಗಳನ್ನು ನಡೆಸಿಕೊಳ್ಳಲು ಅನುಕೂಲವಾಗಿರುತ್ತದೆ. ಕೌಟುಂಬಿಕ ಸಂಬಂಧದ ವಿಷಯಗಳನ್ನು ಕುರಿತು ಮಾತುಕತೆಗಳು ನಡೆಯುವುದಕ್ಕೆ ಇಂಥಾ ವ್ಯವಸ್ಥೆಗಳು ಸಹಾಯಕವಾಗುತ್ತವೆ. ಸೌಹಾರ್ದದ ಕೊಂಡಿಗಳಾಗಿರುತ್ತವೆ.

ಪ್ರತಿ ನಿತ್ಯವೂ ಪ್ರತಿಕ್ಷಣವೂ ನಿಸರ್ಗದ ಮಡಿಲಲ್ಲಿ ನಿರಂತರವಾಗಿ ಶ್ರಮವಹಿಸಿ ದುಡಿಯುವ ಜನತೆ, ಆ ಬದುಕಿನಿಂದ ಸ್ವಲ್ಪ ವಿರಾಮ ಪಡೆದು ನೆಮ್ಮದಿಯ ಉಸಿರು ಬಿಡಲು ಹಬ್ಬ, ತೇರು, ಉತ್ಸವ, ಜಾತ್ರೆ ಮೊದಲಾದ ಸಾಮೂಹಿಕ ಆಚರಣೆಗಳನ್ನು ಕಂಡುಕೊಂಡರು. ಈ ಆಚರಣೆಗಳೆಲ್ಲ ಹುಟ್ಟಿಕೊಂಡದ್ದು ಸಂತೋಷದ ಜೀವನವನ್ನು ನಡೆಸಬೇಕು ಎಂಬ ಉದ್ದೇಶದಿಂದ. ಈ ವಿಧಿಗಳೆಲ್ಲ ಜಾನಪದ ಭಾಗವೇ ಆಗಿರುವುದರಿಂದ ಇವುಗಳಲ್ಲಿ ವೈಯಕ್ತಿಕ ಕಾಳಜಿಗಿಂತ ಸಮಷ್ಟಿಯ ಹಿತಾಸಕ್ತಿಯ ಕಡೆಗೆ ಒಲವು ಮೂಡಿತು. ಸಮಾಜದ ಹಿತರಕ್ಷಣೆಯೇ ಇವುಗಳ ಮುಖ್ಯ ಉದ್ದೇಶವಾಯಿತು. ಇಂಥ ಉದ್ದೇಶವನ್ನು ಅಭಿವ್ಯಕ್ತಿಸುವ ಹಲವು ಆಚರಣೆಗಳಲ್ಲಿ ಜಾತ್ರೆಗಳು ತುಂಬಾ ಪ್ರಮುಖ ಪಾತ್ರವಹಿಸುತ್ತವೆ.[೩]

ಜಾತ್ರೆಗಳು ಮತದ ದೃಷ್ಟಿಯಿಂದಲ್ಲದೇ ಸಮಾಜದ ದೃಷ್ಟಿಯಿಂದಲೂ ಮುಖ್ಯವಾಗಿವೆ ಎನ್ನುವ ಹಾಗೆ, ಈ ಜಾತ್ರೆಯಲ್ಲಿ ಎಲ್ಲಾ ಜಾತಿಗಳವರೂ ಒಟ್ಟಾಗಿ ಸೇರಿ ಭಾವನಾತ್ಮಕ ಏಕತೆಯನ್ನು ಹೊಂದಿರುತ್ತಾರೆ. ವರ್ಷವಿಡೀ ಕೆಲಸ ಮಾಡಿದ ಜನಪದರು ತಮ್ಮ ನೆಂಟರಿಷ್ಟರೊಡಗೂಡಿ ಸುಖವಾಗಿ ಕಾಲಕಳೆಯುವ ಉದ್ದೇಶವು ಸಹ ಇರುತ್ತದೆ.[೪]

ಅನೇಕರ ದೃಷ್ಟಿಯಲ್ಲಿ ಹಳ್ಳಿಗಳಲ್ಲಿ ಜಾತ್ರೆಯೆಂದರೆ ಇಡೀ ಗ್ರಾಮದ ಹಬ್ಬವಾಗಿರುತ್ತದೆ. ಬಂಧು ಬಳಗವನ್ನು ಆಹ್ವಾನಿಸುವುದು. ಊರು-ಕೇರಿಗಳನ್ನು ಹತ್ತಿರ ತಂದು ಒಂದು ಮಾಡುವುದು. ಇದೇ ಸಂದರ್ಭದಲ್ಲಿ ಹೆಚ್ಚಾಗಿ ಕಂಡು ಬರುತ್ತದೆ. ಅನೇಕ ಧರ್ಮಗಳ ಸಂಗಮವನ್ನು ಇಲ್ಲಿ ಕಾಣುವುದರಿಂದ ಜಾತಿಯ ಸಮಸ್ಯೆ ಇಲ್ಲಿ ಕಂಡು ಬರುವುದಿಲ್ಲ. ಇಲ್ಲಿಯ ಜನರಲ್ಲಿ ಸಂಪತ್ತು ನಾಶವಾಗಿರುವುದಿಲ್ಲ. 'ಧರ್ಮವೇ ನಿಜವಾದ ಸಂಪತ್ತು' ಎಂದು ಭಾವಿಸಿಕೊಂಡಿರುತ್ತಾರೆ.

ಯಾವುದೇ ಒಂದು ಜಾತಿಗೆ ಸಂಬಂಧಿಸಿದಂತೆ ಜಾತ್ರೆ ನಡೆಯುತ್ತಿರುವಾಗಲೂ ಎಲ್ಲ ವರ್ಗದವರೂ ಭಾಗವಹಿಸಿ ಅದು ತಮ್ಮ ದೈವವೇ ಎಂದು ಭಾವಿಸುವ ಜನತೆ, ಗ್ರಾಮೀಣರು ಹೀಗೆ ಆಚರಿಸುವ ಜಾತ್ರೆಗಳಲ್ಲಿ ಕಾಣಸಿಕೊಳ್ಳುತ್ತಾರೆ. ಇಲ್ಲಿ ಭಾವನಾತ್ಮಕ ಏಕತೆ ಇರುತ್ತದೆ.

ಕಡಲಬಾಳು ಆಂಜನೇಯ ಸ್ವಾಮಿಯ ಭಕ್ತರು ಅಸಂಖ್ಯಾತರು. ಈತನ ಭಕ್ತರು ಇಂದಿಗೂ ದೂರದ ಸುಮಾರು ೪೮ ಊರುಗಳಲ್ಲಿ ಇದ್ದಾರೆ. ಅವುಗಳಲ್ಲಿ ಬೆಂಗಳೂರು, ಬಳ್ಳಾರಿ, ದಾವಣಗೆರೆ, ರಾಣೆಬೆನ್ನೂರು, ಗದಗ, ಗಂಗಾವತಿ, ಹರಪನಹಳ್ಳಿ, ಕಿನ್ನಾಳ ಊರುಗಳಲ್ಲಿ ಆಂಜನೇಯನ ಭಕ್ತರನ್ನು ಕಾಣಬಹುದು. ಮುಖ್ಯವಾಗಿ ನಾಯಕ (ವಾಲ್ಮೀಕಿ) ಮತ್ತು ಕುರುಬ ಜನಾಂಗದ ದೂರದ ಗ್ರಾಮದ ಎಷ್ಟೋ ಕುಟುಂಬಗಳಿಗೆ ಈ ಕಡಲಬಾಳಪ್ಪನೇ ಮನೆದೇವರು. ತಮ್ಮ ಮಕ್ಕಳಿಗೆ ಕಡಲಬಾಳಪ್ಪನೆಂಬ

ಹೆಸರಿಡುವ ರೂಢಿಯೂ ಇಂದಿಗೂ ನಡೆದಿದೆ. ಮತ್ತು ಸುತ್ತಮುತ್ತಲಿನ ಅನೇಕ ಗ್ರಾಮದ ದೇವತೆಗಳಿಗೆಲ್ಲ ಈ ಕಡಲಬಾಳಪ್ಪನೇ ನಾಯಕನ ಸ್ಥಾನದಲ್ಲಿದ್ದಾನೆ. ಗ್ರಾಮದ ಹಾಗೂ ಸುತ್ತಮುತ್ತಲ ಹಳ್ಳಿ ಜನರ ಆರಾಧ್ಯ ದೈವವಾಗಿದ್ದಾನೆ. ಈ ಕಡಲಬಾಳಪ್ಪನ ಜಾತ್ರೆಗೆ ದೂರದ ಊರುಗಳಿಂದ ಜನರು ಕಾಲ್ನಡಿಗೆ, ಬಂಡಿ, ಟ್ರಾಕ್ಟರ್, ಬಸ್ಸುಗಳಲ್ಲಿ ಬರುತ್ತಾರೆ. ಜಾತ್ರೆಗೆ ಬಂಡಿಗಳಲ್ಲಿ ಬರುವುದೇ ಹೆಚ್ಚು. ಜಾತ್ರೆಗೆ ಬಂದ ಭಕ್ತರು ಹರಕೆ ತೀರಿಸುವುದು, ಮುದ್ರೆ ಹಾಕಿಸಿಕೊಳ್ಳುವುದು, ದಾಸೋಗ ನೀಡಿಸುವುದು ಮುಂತಾದ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಾರೆ.

ಆಂಜನೇಯ ಜಾತ್ರೆಯ ಸಂದರ್ಭದಲ್ಲಿ ಜರುಗುವ ಆಚರಣೆಗಳು ರಾಮಾಯಣದ ಪ್ರಮುಖ ಸಂದರ್ಭದ ಸಂಕೇತಗಳಾಗಿವೆ. ಅವುಗಳಲ್ಲಿ ೧. ರಾಮಸೀತೆಯರ ಮದುವೆ ಮಾಡುವುದು. ೨. ರಾಮಸೀತೆಯರ ಮದುವೆಯ ಮೆರವಣಿಗೆ ಮಾಡುವುದು (ರಥೋತ್ಸವ) ೩. ಆಂಜನೇಯ ಸಂಜೀವಿನಿ ಗಿಡತರುವುದು (ಬ್ಯಾಟಗಿಡ) ೪. ಆಂಜನೇಯ ಸಮುದ್ರ ಹಾರುವುದು (ಓಕಳಿಹೊಂಡ ಹಾರುವುದು) ೫. ರಾಮ ಕಾಡಿನಲ್ಲಿ ಬೇಟೆಗೆ ಹೋಗುವುದು ೬. ರಾಮ ಬೇಟೆಯಿಂದ ತಡವಾಗಿ ಬಂದಾಗ ರಾಮಸೀತೆಯರ ಮಧ್ಯೆ ನಡೆಯುವ ಮಾತುಕತೆ (ಕಡುಬಿನ ಕಾಳಗ) ಇವುಗಳನ್ನು ನಾವು ಪ್ರಮುಖವಾಗಿ ಕಾಣಬಹುದು

ಕಡಲಬಾಳು ಆಂಜನೇಯಸ್ವಾಮಿ ಜಾತ್ರೆಯ ವಿವಿಧ ಕಾರ್ಯಕ್ರಮಗಳು

ಸ್ವಸ್ತಿ ಶ್ರೀ ವಿಜಾಯಾಭ್ಯುದಯ ಶ್ರೀಮನ್ನೃಪ ಶಾಲಿವಾಹನ ಶಕೆ ೧೯೨೪ನೇ ಚಿತ್ರಬಾನು ಸಂವತ್ಸರದ ಚೈತ್ರ ಶುದ್ಧ ಪಂಚಮಿ ದಿನಾಂಕ ೧೮.೪.೨೦೦೨ನೇ ಗುರುವಾರ ದಿವಸ ಶ್ರೀ ಆಂಜನೇಯ ರಥೋತ್ಸವ ಜರುಗುವುದು.

ಚೈತ್ರಶುದ್ಧ ಪಾಡ್ಯ ದಿನಾಂಕ ೧೩.೪.೨೦೦೨ನೇ ಶನಿವಾರ ಕಲಶೋತ್ಸವ

ಚೈತ್ರಶುದ್ಧ ಪಂಚಮಿ ದಿನಾಂಕ ೧೮.೪.೨೦೦೨ನೇ ಗುರುವಾರ ರಥೋತ್ಸವ

ಚೈತ್ರಶುದ್ಧ ಷಷ್ಠಿ ದಿನಾಂಕ ೧೯.೪.೨೦೦೨ನೇ ಶುಕ್ರವಾರ ಅಗ್ನಿಕೊಂಡ ಮತ್ತು ಮುಳ್ಳುಪವಾಡ

ಚೈತ್ರಶುದ್ಧ ಸಪ್ತಮಿ ದಿನಾಂಕ ೨೦.೪.೨೦೦೨ನೇ ಶನಿವಾರ ಕಡುಬಿನ ಕಾಳಗ ಮತ್ತು ಓಕಳಿ.

ಯುಗಾದಿ : (ಕಲಶೋತ್ಸವ) ರಥೋತ್ಸವದ ಧಾರ್ಮಿಕ ವಿಧಿವಿಧಾನಗಳು ಯುಗಾದಿಯಂದು ಆರಂಭವಾಗುತ್ತವೆ. ಚೈತ್ರ ಶುದ್ಧ ಪಾಢ್ಯದಂದು ಆಂಜನೇಯನ ರಥೋತ್ಸವದ ಕಲಶೋತ್ಸವ ಕಾರ್ಯಕ್ರಮ ಇರುತ್ತದೆ. ಅಂದು ಸಾಯಾಂಕಾಲ ಐದು ಗಂಟೆಗೆ ಆಂಜನೇಯನ ದೇವಸ್ಥಾನದಲ್ಲಿ ಆಂಜನೇಯನ ಪೂಜೆ ಮಾಡುವ ಪೂಜಾರು ಮನೆಯಿಂದ ಕಳಸವನ್ನು ತೆಗೆದುಕೊಂಡು ಬಂದು ದೇವಸ್ಥಾನದಲ್ಲಿ ಕಂಬಳಿ ಹಾಸಿ ಅದರ ಮೇಲಿಟ್ಟು ಪೂಜೆ ಮಾಡುತ್ತಾರೆ. ನಂತರ ಅದನ್ನು ಪೂಜಾರಿಯೊಂದಿಗೆ ತಲೆಯ ಮೇಲೆ ಹೊತ್ತುಕೊಂದು ವಾದ್ಯಗಳ ಸಮೇತ ರಥದ ಹತ್ತಿರ ಒಯ್ಯುತ್ತಾರೆ. ಕಳಸ ತೆಗೆದುಕೊಂಡು ಹೋಗುವಾಗ ಜೊತೆಯಲ್ಲಿ ದಾಸಯ್ಯ, ಪವಾಡ ಮಾಡುವ ಬಾಳಪ್ಪ ಇರುತ್ತಾರೆ.

ರಥದ ಹತ್ತಿರ ಊರಿನ ದೈವಸ್ಥರೆಲ್ಲಾ ಸೇರಿರುತ್ತಾರೆ. ಕಳಸವನ್ನು ರಥದ ಸುತ್ತ ಮೂರು ಸಲ ಪ್ರದಕ್ಷಿಣೆ ಹಾಕಿ ರಥದ ಮುಂದಿಟ್ಟು ಮತ್ತೊಮ್ಮೆ ಪೂಜೆ ಮಾಡಿ ಕಳಸವನ್ನು ರಥದ ಮೇಲೆ ಇಡುತ್ತಾರೆ.

ನಂತರ ಪಂಚಮಿ ದಿನ ರಥೋತ್ಸವ ಜರುಗುವುದಕ್ಕಿಂತ ಮುಂಚಿತವಾಗಿ ಪ್ರತಿದಿನ ಬಲಿ ಹಾಕುವುದು. ರಾತ್ರಿ ಉಚ್ಚೈ ಉತ್ಸವ ಜರುಗುತ್ತವೆ. ರಥೋತ್ಸವದ ಹಿಂದಿನ ದಿನ ಆಂಜನೇಯನ ದೇವಸ್ಥಾನದಲ್ಲಿ ರಾಮ-ಸೀತೆಯರ ವಿವಾಹ ಕಾರ್ಯಕ್ರಮವನ್ನು ಏರ್ಪಡಿಸಿರುತ್ತಾರೆ.

ತೇರು : ತೇರಿಗೆ ಬಂಡಿ, ಕುರ್ಜು, ವಾನ್ಯೇವು ಎಂಬ ಹೆಸರುಗಳಿವೆ. ತೇರು ದ್ರಾವಿಡ ಶಬ್ದ. ಇದಕ್ಕೆ ತಮಿಳು, ತೆಲುಗು, ಮಲಯಾಳಂ, ತುಳು ಭಾಷೆಗಳಲ್ಲಿ ಜ್ಞಾತಿ ಪದಗಳಿವೆ. ತೇರಿನ ವಿವರಗಳಲ್ಲಿ ಚಕ್ರ, ಅಲಂಕಾರದ ಭಾಗ, ಶಿಖರ, ಕಲಶಗಳಿದ್ದು, ಗೋಪುರಾಕಾರದ ಶೈಲಿಯ ರಥ ವಿಜಯನಗರ ಕಾಲದಿಂದೀಚೆ ಬಳಕೆಗೆ ಬಂದಿರಬೇಕೆಂದು ಹಂಪನಾ ವಾದ. ಆದರೆ ಈ ಅಭಿಪ್ರಾಯ ಸರಿ ಎಂದು ತೋರುವುದಿಲ್ಲ. ಬಡಗರಲ್ಲಿ ತೇರಿನ ವಿಷಯ ಬಂದಾಗ ಇದರ ಪ್ರಸ್ತಾಪವಾಗಲಿದೆ. ರಥಕ್ಕೆ 'ಕುರ್ಜು' ಎಂಬ ಪದವೂ ಇದೆ. 'ರಾಜರು', 'ವಿಗ್ರಹ', 'ವಧುವರರು ಕೂರುವಮಂಟಪ', 'ಅಟ್ಟಳೆ' 'ರಾಶಿ' 'ಗುಡ್ಡೆ' 'ಒಟ್ಟಿಲು' ಎಂಬರ್ಥಗಳಿವೆ. ಇದು ಸಹ ದ್ರಾವಿಡ ಪದ ಆಗಿದೆ.

"ರಥವೆಂದರೆ ಸಾಮಾನ್ಯವಾಗಿ ನಾವು ಏರಿ ಹೋಗುವುದು. ವಾಹನ ಆದರೆ ಪದದ ಮೂಲಾರ್ಥ ಆಟವಾಡುವುದು ಸಂತೋಷಪಡುವುದು."

ಜಾತ್ರೆಗಳಲ್ಲಿ ಎಳೆಯಲಾಗುವ ತೇರು ವಲಸೆಗಾರರ ಪೆಟ್ಟಿಗೆ ದೇವರನ್ನು (ಸತ್ತಹಿರಿಯರು) ಒಯ್ಯುವ ಕ್ರಿಯೆಯನ್ನು ಧ್ವನಿಸುತ್ತದೆ. ಮೊದಲು ಮೂಲದೇವತೆಯನ್ನು ಕೊಂಡೊಯ್ಯಲಾಗುತ್ತಿತ್ತು. ಸ್ಥಾವರಗೊಂಡ ನಂತರ 'ಉತ್ಸವಮೂರ್ತಿ'ಯನ್ನು ತೇರಿನಲ್ಲಿಟ್ಟು ಎಳೆಯುವ ಪದ್ಧತಿ ಬೆಳೆಯಿತು. ಈ ಹಂತದಲ್ಲಿ ತೇರು ವೈಭವೋಪೇತವಾಗಿ ಪರಿಷ್ಕಾರಗೊಂಡಿತು."

ಹಂಪನಾ ಈ ರೀತಿ ಬರೆಯುತ್ತಾರೆ. "ಬೇರೆ ಬೇರೆ ಕಡೆಗಳಿಂದ ಬಂದ ಸಾಂಸ್ಕೃತಿಕ ಸಂಬಂಧವಾದ ಹಲವಾರು ಸಂಗತಿಗಳು ಆಚರಣೆಯ ರೂಪದಲ್ಲಿ ಜಾತ್ರೆಗಳಲ್ಲಿ ಅಭಿವ್ಯಕ್ತವಾಗುತ್ತವೆ."

ಹಳ್ಳಿಗರ ಆರಾಧ್ಯ ದೇವತೆ ಉತ್ಸವ ಮೂರ್ತಿಯ ರೂಪದಲ್ಲಿ ಹಳ್ಳಿಯಲ್ಲಿ ಸಂಚರಿಸುವುದುಂಟು. ಅದರ ಪ್ರಕಾರ ಚಿಕ್ಕವರು, ವಯೋವೃದ್ಧರು, ಅಶಕ್ತರು, ಅನಾರೋಗ್ಯವಂತರಿಗೆ ದೇವರದರ್ಶನಕ್ಕಾಗಿ ದೇವಾಲಯಕ್ಕೆ ಹೋಗುವುದು ಆಗದ್ದರಿಂದ ವರ್ಷಕ್ಕೊಮ್ಮೆಯಾದರೂ ದೇವರದರ್ಶನ ಪಡೆಯುವುದಕ್ಕಾಗಿ ಹಳ್ಳಿಯ ಒಳಗೆ ದೇವರು ಸುತ್ತಾಡಿದರೆ ಹಳ್ಳಿಗರಿಗೆ ಒಳ್ಳೆಯದಾಗುವುದು ಎಂಬುವ ಪ್ರಾಚೀನರ ಕಲ್ಪನೆಯಿಂದ ರಥೋತ್ಸವದ ವ್ಯವಸ್ಥೆ ಉಂಟಾಗಿರಬೇಕು. ತೇರು ನಾಲ್ಕು ಗಾಲಿ ಜೋಡಿಸಿದ ದೇವಾಲಯದಂತೆ ಇರುವುದು. ದೇವಾಲಯದ ವಿವಿಧ ಭಾಗಗಳನ್ನು ಅದರಲ್ಲಿ ಗುರುತಿಸಬಹುದು. ದೇವಾಲಯದ ಗೋಪುರದಂತೆ ಎತ್ತರಿಸಿ ಅದರಲ್ಲಿ ಪತಾಕೆ, ಪಟಗಳನ್ನು ಅಲಂಕರಿಸಿರುವರು. ಒಳಗೆ ಕಂಬಗಳನ್ನು ರಚಿಸುವರು. ಮೇಲೆ ಕಂಚು ಅಥವಾ ಹಿತ್ತಾಳೆಯ ಕಳಸವನ್ನು ತುದಿಯಲ್ಲಿ

ಶೃಂಗರಿಸಿರುವರು. ಗಾಲಿಗಳು ಕಟ್ಟಿಗೆ, ಕಲ್ಲುಗಳಿಂದ ರಚಿಸಿರುತ್ತವೆ. ತೇರುಗಳನ್ನು ಕಂಚು, ಹಿತ್ತಾಳೆ, ಬೆಳ್ಳಿ, ಬಂಗಾರದಿಂದಲೂ ರಚಿಸಿರುವರು. ಇವುಗಳ ಗಾತ್ರ ಚಿಕ್ಕದಾಗಿರುವುದು. ಇದನ್ನು ಯುದ್ಧಗಳಲ್ಲಿ ಉಪಯೋಗಿಸುತ್ತಿದ್ದರು. ತೇರನ್ನು ಹಗಲು ಉಚ್ಛೈಗಳನ್ನು ರಾತ್ರಿ ಎಳೆಯುವರು'

'ಹೋಳಿಗೆ ಇಲ್ಲದ ಹಬ್ಬವಲ್ಲ, ರಥವಿಲ್ಲದ ಜಾತ್ರೆಯಿಲ್ಲ' ಎನ್ನುವ ಗಾದೆ ಮಾತಿನಂತೆ ಊರಿನ ದೈವದ ಜಾತ್ರೆಗೆ ರಥ ಇದ್ದೇ ಇರುತ್ತದೆ.

ರಥೋತ್ಸವ : ಈ ರಥೋತ್ಸವ ಶ್ರೀರಾಮ ಮತ್ತು ಸೀತೆಯರ ಮದುವೆಯ ಮೆರವಣಿಗೆಯ ರೂಪದಲ್ಲಿ ನಡೆಯುತ್ತದೆ. ಈ ಆಂಜನೇಯನ ರಥೋತ್ಸವ ಅನಾದಿಕಾಲದಿಂದಲೂ ನಡೆದುಕೊಂಡು ಬಂದಿದೆ. ಈ ರಥೋತ್ಸವ ಎಂದಿನಿಂದ ಪ್ರಾರಂಭವಾಯಿತು. ರಥವನ್ನು ಯಾರು, ಎಷ್ಟರಲ್ಲಿ ನಿರ್ಮಿಸಿದರು ಎನ್ನುವ ಮಾಹಿತಿ ತಿಳಿದು ಬರುವುದಿಲ್ಲ. ರಥದ ಸಾಮಾನುಗಳು ಹೋದ ಹಾಗೆ ಅವುಗಳನ್ನು ಊರಿನ ದೈವಸ್ಥರು ಬದಲಾಯಿಸುತ್ತಾ ಬಂದಿದ್ದಾರೆ. ಈಗಿರುವ ರಥವೇ ಮೊದಲನೆಯದು. ಅದಕ್ಕೂ ಮುಂಚೆ ಯಾವ ರಥವೂ ಇರಲಿಲ್ಲವೆಂಬುದು ತಿಳಿದು ಬರುತ್ತದೆ. ರಥದ ನಿರ್ಮಾಣ ಕಟ್ಟಿಗೆಯಿಂದ ಆಗಿದೆ. ರಥೋತ್ಸವದ ಸಂದರ್ಭದಲ್ಲಿ ರಥದ ಅಂಕಣಗಳನ್ನು ಊರಿನ ಬಡಿಗೇರು ಮನೆತನದವರು ಕಟ್ಟುತ್ತಾರೆ ಮತ್ತು ರಥದ ಗಡ್ಡಿಗೆ ಎಣ್ಣೆಯನ್ನು ಸ್ವಾಮಿಯ ಭಕ್ತರು ಹಚ್ಚಿಸುತ್ತಾರೆ. ರಥಕ್ಕೆ ಬೇಕಾದ ಸಾಮಾನುಗಳನ್ನು ಊರಿನ ದೈವಸ್ಥರು ಪಟ್ಟಿಯ ಮೂಲಕ ಹಣ ಸಂಗ್ರಹಿಸಿ ತರುತ್ತಾರೆ ಮತ್ತು ಕೆಲವು ಭಕ್ತರು ಸಹ ಕೊಡಿಸುತ್ತಾರೆ.

ಚೈತ್ರಶುದ್ಧ ಪಾಢ್ಯದ ನಂತರ ಐದನೇ ದಿನವಾದ ಚೈತ್ರಶುದ್ಧ ಪಂಚಮಿಯಂದು ರಥೋತ್ಸವ ಜರುಗುತ್ತದೆ. ಬಿದಿಗಿಯಿಂದ ಆರಂಭವಾಗಿ ಆಗಮೋಕ್ತವಾದ ಎಲ್ಲಾ ವಿಧಿವಿಧಾನಗಳಿಂದ ಐದು ದಿನ ಉತ್ಸವ ಜರುಗಿ ಆರನೇ ದಿನ ಅವಭೃತಸ್ನಾನದೊಂದಿಗೆ ಮುಕ್ತಾಯವಾಗುತ್ತದೆ. ಪ್ರತಿ ದಿನ ಬಲಿ ಹಾಕುವುದು. ರಾತ್ರಿ ಉಚ್ಛೈ, ಪಂಚಮಿದಿನ ಸಾಯಂಕಾಲ ೫ ಗಂಟೆಗೆ ತೇರು ಜರುಗುತ್ತದೆ. ಮೊದಲಿಗೆ ತೇರು ನಿಂತಿರುವ ಜಾಗದಲ್ಲಿ ರಥಾಂಗಹೋಮ ಮಾಡಲಾಗುತ್ತದೆ. ಈ ರಥೋತ್ಸವಕ್ಕೆ ಸುತ್ತಮುತ್ತಲಿನ ಗ್ರಾಮಗಳಿಂದ ಎಲ್ಲಾ ಜಾತಿಯ ಜನರು ಸೇರುತ್ತಾರೆ. ರಥೋತ್ಸವಕ್ಕೆ ಹಣ್ಣು, ಕಾಯಿಗಳ ಕಾಣಿಕೆ ಸಲ್ಲಿಸುತ್ತಾರೆ.

ರಥೋತ್ಸವದ ದಿನ ಮೊದಲಿಗೆ ಪಾಲಕಿಯಲ್ಲಿ ಮಂಗಳವಾದ್ಯಗಳೊಂದಿಗೆ ಶ್ರೀರಾಮದೇವರ ಉತ್ಸವ ಮೂರ್ತಿಯನ್ನು ಹೊರಡಿಸುತ್ತಾರೆ. ನಂತರ ರಥದಲ್ಲಿ ರಾಮದೇವರ ಮೂರ್ತಿಯನ್ನು ಮುಖ್ಯ ಪೀಠದ ಮೇಲೆ ಕೂಡಿಸಿ ಮಾರುತಿಯ ಉತ್ಸವಮೂರ್ತಿಯನ್ನು ಅದರ ಕೆಳಗಡೆ ಕೂಡಿಸುತ್ತಾರೆ. ರಾಮದೇವರ ಮೂರ್ತಿಯನ್ನು ಹೊರಡಿಸುವವರು ಹಾಗೂ ಅವುಗಳೊಡನೆ ರಥದಲ್ಲಿ ವೈದಿಕ ಮನೆತನದವರೇ ಕೂಡುತ್ತಾರೆ. ಮಾರುತಿಯ ಉತ್ಸವಮೂರ್ತಿಯನ್ನು ತೆಗೆದುಕೊಂಡು ಮಾರುತಿಯ ಪೂಜಾರಿ ಮತ್ತು ಸಧ್ಯ ಪವಾಡ ಮಾಡುವ ಬಾಳಪ್ಪ ರಥದಲ್ಲಿ ಕುಳಿತುಕೊಳ್ಳುತ್ತಾರೆ. ಇತ್ತೀಚೆಗೆ ರಥೋತ್ಸವದ ದಿನ ಪಟಾಕ್ಷಿಯ (ದೇವರಧ್ವಜ) ಹರಾಜು ಮಾಡಲಾಗುತ್ತದೆ. ಪ್ರತಿವರ್ಷ ಪಟಾಕ್ಷಿ

ಹರಾಜಿನಿಂದ ಬಂದ ಹಣವನ್ನು ಸ್ವಾಮಿಯ ಸೇವೆಗೆ ಉಪಯೋಗಿಸುತ್ತಾರೆ. ರಥೋತ್ಸವ ಸಂದರ್ಭದಲ್ಲಿ ದುರುಗಮ್ಮ ಪೂಜಾರಿ ಸಹ ಇರುತ್ತಾನೆ. ಪಟಾಕ್ಷಿ ಹರಾಜಾದ ನಂತರ ರಥ ಪೂರ್ವದಿಕ್ಕಿನತ್ತ ಸಾಗುತ್ತದೆ. ಆಗ ಜನರು ರಥದ ಗಾಲಿಗೆ ಕಾಯಿಗಳನ್ನು ಒಡೆಯುತ್ತಾರೆ. ಜನರು ಬಾಳೆಹಣ್ಣುಗಳನ್ನು ರಥದ ಮೇಲೆ ಎಸೆಯುತ್ತಾರೆ. ಎಲ್ಲಾ ಜನಾಂಗದವರು ಸಹ ಸೇರಿ ರಥವನ್ನು ಎಳೆಯುತ್ತಾರೆ. ರಥದ ಹತ್ತಿರ ಜನರ ನೂಕು ನುಗ್ಗಲನ್ನು ತಪ್ಪಿಸಲು ಹರಿಜನಕೇರಿಯ ಮುಖಂಡರು ನಿಂತಿರುತ್ತಾರೆ. ರಥವು ನಿಧಾನವಾಗಿ ಚಲಿಸುತ್ತಾ ಊರಮುಂದಿನ ಪಾದಗಟ್ಟಿ ಹನುಮಪ್ಪನ ಹತ್ತಿರ ಬರುತ್ತದೆ. ಅಲ್ಲಿ ರಥವನ್ನು ಸ್ವಲ್ಪ ಹೊತ್ತು ನಿಲ್ಲಿಸಿ ಪಾದಗಟ್ಟಿ ಹನುಮಪ್ಪನ ಪೂಜೆ ಮಾಡಿ ಮಂಗಳಾರತಿ ನಂತರ ರಥದ ಹಗ್ಗವನ್ನು ಪಶ್ಚಿಮಾಭಿಮುಖವಾಗಿ ಕಟ್ಟಿ ರಥವನ್ನು ಮೂಲ ಸ್ಥಳದತ್ತ ಎಳೆಯುತ್ತಾರೆ. ಮೂಲ ಸ್ಥಳ ಊರಿನ ಮಧ್ಯಭಾಗದಲ್ಲಿ ಆಂಜನೇಯ ದೇವಸ್ಥಾನದ ಹತ್ತಿರ ಇದೆ. ನಂತರ ಉತ್ಸವ ಮೂರ್ತಿಯನ್ನು ಗರ್ಭಗುಡಿಗೆ ವಾದ್ಯ ಸಮೇತ ತೆಗೆದುಕೊಂಡು ಹೋಗುತ್ತಾರೆ. ರಥೋತ್ಸವಕ್ಕೆ ಸುತ್ತಮುತ್ತಲ ಹಳ್ಳಿಗಳ ಭಕ್ತರು ಬಂದಿರುತ್ತಾರೆ. ರಥ ಮೂಲ ಸ್ಥಳ ಸೇರುವ ಹೊತ್ತಿಗೆ ಸಾಯಂಕಾಲ ಏಳು ಗಂಟೆಯಾಗಿರುತ್ತದೆ. ರಥದ ಹಿಂದೆ ಕಳಸ ಹಿಡಿದ ಮಹಿಳೆಯರೂ ಇರುತ್ತಾರೆ. ಹೀಗೆ ಈ ಪದ್ಧತಿ ಬಹಳ ಹಿಂದಿನ ಕಾಲದಿಂದಲೂ ನಡೆದುಕೊಂಡು ಬಂದಿದೆ.

೧೯೪೩ ರಲ್ಲಿ ರಥದ ಹೊಸ ಅಚ್ಚು ಮಾಡಿಸಿದ್ದು : ೧೯೪೩ ರಲ್ಲಿ ರಥದ ಅಚ್ಚು ಶಿಥಿಲಗೊಂಡಿತು. ಹೊಸ ಅಚ್ಚು ಹುಡುಕಲು ಒಂಟಿಗೋಡಿ ವಿರುಪಣ್ಣ ಮತ್ತು ಊರಿನಗೌಡರಾದ ಪಾಟೇಲ್ ಗುರುಬಸವನಗೌಡರು ಹೋದರು. ನೆಲ್ಕುದುರೆಯಲ್ಲಿ ಅಚ್ಚಿಗೆ ಬೇಕಾದ ಮರ ಇರುವುದು ತಿಳಿಯಿತು. ಆಗ ಅಲ್ಲಿನ ಚೆನ್ನಬಸಪ್ಪನಿಗೆ ವಿಷಯ ತಿಳಿಸಲಾಗಿ ಆತ ತನ್ನ ಹೊಲದಲ್ಲಿದ್ದ ಚಿರಚದ ಮರವನ್ನು ಅಚ್ಚಿಗೆ ದಾನವಾಗಿ ಕೊಡಲು ಒಪ್ಪಿದ.

ಬಹಳ ಎತ್ತರವಾಗಿ ಬೆಳೆದಿದ್ದ ಮರವನ್ನು ಕಡಿಯಲು ಮತ್ತು ಬಂಡಿಯಲ್ಲಿ ಹೇರಿಕೊಂಡು ಬರಲು ಒಂದುವಾರ ಬೇಕಾಯಿತು. ಪಕ್ಕದ ಗ್ರಾಮವಾದ ಉಲುವತ್ತಿಯ ಜನರು ಅಚ್ಚನ್ನು ಹೇರಲು ಮತ್ತು ಅದನ್ನು ಇಲ್ಲಿಗೆ ತರಲು ಸಹಾಯ ಮಾಡಿದರು. ಹೀಗೆ ೧೯೪೩ ಫೆಬ್ರವರಿ ತಿಂಗಳಲ್ಲಿ ಈಗಿರುವ ಅಚ್ಚನ್ನು ರಥಕ್ಕೆ ಜೋಡಿಸಲಾಯಿತು.

೧೯೭೨ ರಲ್ಲಿ ರಥ ನಿಲ್ಲಿಸಲು ತಗಡಿನ ಛಾವಣಿ ನಿರ್ಮಿಸಿದ್ದು : ರಥೋತ್ಸವ ಮುಗಿದ ಮೇಲೆ ತೇರನ್ನು ದೇವಸ್ಥಾನದ ಮುಂದೆ ನಿಲ್ಲಿಸಿ ಅದನ್ನು ತೆಂಗಿನ ಗರಿಗಳಿಂದ ಮುಚ್ಚುತ್ತಿದ್ದರು. ಮಳೆಗಾಲದಲ್ಲಿ ಮಳೆಯ ನೀರು ತೇರಿನ ಮೇಲೆ ಬೀಳುತ್ತಿತ್ತು. ಇದನ್ನು ನೋಡಿದ ಹೊಸಪೇಟೆಯ ನಾಯಕ ಜನಾಂಗದ ವಕೀಲರಾದ ಹನುಮಂತಪ್ಪನವರು ೧೯೭೨ರಲ್ಲಿ ೧೬ ರೂಪಾಯಿಗೆ ಒಂದರಂತೆ ೩೦೦ ತಗಡನ್ನು ಖರೀದಿಸಿ ತೇರು ಸುರಕ್ಷಿತವಾಗಿರಲು ಆಗಿನ ಗ್ರಾಮಪಂಚಾಯಿತಿಯ ಅಧ್ಯಕ್ಷರಾಗಿದ್ದ ಒಂಟಿಗೋಡಿ ವಿರುಪಣ್ಣನವರ ಮುಖಂಡತ್ವದಲ್ಲಿ ತಗಡಿನ ಛಾವಣಿಯನ್ನು ನಿರ್ಮಿಸಿದರು. ವಕೀಲ ಹನುಮಂತಪ್ಪನವರು

ಆಂಜನೇಯನ ಪರಮಭಕ್ತರಾಗಿದ್ದರು. ತಗಡಿನ ಛಾವಣಿ ನಿರ್ಮಿಸಲು ಊರಿನ ಜನರು ಸಹ ಪಟ್ಟಿಯ ಮೂಲಕ ಹಣ ನೀಡಿದ್ದಾರೆ.

**ಅಗ್ನಿಕೊಂಡ (ಅಗ್ನಿಪವಾದ)**

ಆಚರಣೆಗೆ ಸಂಬಂಧಿಸಿದಂತೆ ಪ್ರಾದೇಶಿಕವಾದ ವ್ಯತ್ಯಾಸಗಳು ಎಷ್ಟೇ ಇದ್ದರೂ ಸಾಮಾನ್ಯವಾಗಿ ಕೊಂಡ ಹಾಯುವ ಸಂಪ್ರದಾಯದಲ್ಲಿ ಕೆಲಕಂಡ ಅಂಶಗಳು ಇದ್ದೇ ಇರುತ್ತವೆ. ಕೆಂಡದಿಂದ ತುಂಬಿರುವ ವಿಶಾಲವಾದ ಒಂದು ಗುಂಡಿ. ಗುಂಡಿಯ ತುಂಬಾ ಸೌದೆಯ ತುಂಡುಗಳನ್ನು ತುಂಬಿ ಅದಕ್ಕೆ ಬೆಂಕಿಹಚ್ಚಿ ಕೆಂಡವನ್ನು ಮಾಡುವುದು. ಕೆಂಡದ ಮೇಲಿನ ಬೂದಿಯನ್ನು ಹಾರಿಸಿ ಕೇವಲ ಕೆಂಡ ಮಾತ್ರ ಉಳಿಯುವಂತೆ ವ್ಯವಸ್ಥೆ ಮಾಡುವುದು. ದೇವರ ಪೂಜಾರಿ ಅಥವಾ ದೇವರಿಗೆ ಹರಿಸಿಕೊಂಡ ಜನ ಒಬ್ಬರ ಹಿಂದೊಬ್ಬರು 'ದೇವರ ಮೇಲೆ ಭಾರ ಹಾಕಿ' ದೇವರ ಮೇಲೆ ತಮಗಿರುವ ನಂಬಿಕೆಯ ಬಲದಿಂದ ನಾಲ್ಕಾರು ಹೆಜ್ಜೆಗಳನ್ನು ಹಾಕಿ, ಕೆಲವಾರು ಸೆಕೆಂಡುಗಳ ಕಾಲದಲ್ಲಿ ಐದಾರು ಅಡಿ ದೂರ ಇರುವ ಕೆಂಡದ ಕೊಂಡವನ್ನು ಹಾಯ್ದು ಬರುವುದು. ಕೆಂಡದ ಮೇಲೆ ಅವರು ನಡೆದು ಬಂದರೂ ಕೂಡ ಅವರ ಪಾದಗಳಾಗಲಿ, ಶರೀರದ ಇತರ ಭಾಗಗಳಾಗಲಿ, ಶರೀರದ ಮೇಲಿನ ಬಟ್ಟೆಯಾಗಲಿ ಸುಟ್ಟಿರದಿರುವುದು. ಹೀಗೆ ಕೆಂಡ ಈ ವ್ಯಕ್ತಿಗಳ ಶರೀರವನ್ನು ಸುಡದಿರಲು ಈ ವ್ಯಕ್ತಿಗಳು ದೇವರಲ್ಲಿ ಇಟ್ಟಿರುವ ನಂಬಿಕೆಯೇ ಕಾರಣವೆಂದು ಜನ ಹಾಗೂ ಕೊಂಡ ಹಾಯ್ದ ವ್ಯಕ್ತಿಗಳು ನಂಬುವುದು. ದೇವರಲ್ಲಿ ನಂಬಿಕೆ ಇಲ್ಲದ, ನಿಯಮಗಳನ್ನು ಸರಿಯಾಗಿ ಪಾಲಿಸದ ವ್ಯಕ್ತಿ ಕೆಂಡದ ಮೂಲಕ ಹಾಯ್ದು ಬಂದರೆ ಅವನ ಕಾಲು ಸುಟ್ಟೇ ಸುಡುವುದೆಂದು ಜನನಂಬುವುದು. ಅಂತೂ ಒಟ್ಟಾರೆ ದೇವರನ್ನು ನಂಬಿದ ವ್ಯಕ್ತಿ ಕೊಂಡ ಹಾಯ್ದರೆ ಅವನ ಕಾಲು ಸುಡುವುದಿಲ್ಲ. ದೇವರನ್ನು ನಂಬದಿದ್ದರೆ ಕಾಲು ಸುಡುವುದು ಖಂಡಿತ ಎಂಬುದು ಜನಸಾಮಾನ್ಯರ ದೃಢವಾದ ನಂಬಿಕೆ.

ಈ ಸಂಪ್ರದಾಯ ಈಚಿನದೇನೂ ಅಲ್ಲ. ಅದಕ್ಕೆ ಹಲವಾರು ಶತಮಾನಗಳ ಇತಿಹಾಸವಿದೆ. ಹಾಗೆಯೇ ಈ ಸಂಪ್ರದಾಯ ಕೇವಲ ಕರ್ನಾಟಕಕ್ಕೆ ಮಾತ್ರ ಸೀಮಿತವಾದುದೇನೂ ಅಲ್ಲ. ಪ್ರಪಂಚದ ಹಲವಾರು ದೇಶಗಳಲ್ಲಿ ಬಳಕೆಯಲ್ಲಿತ್ತು; ಇಂದಿಗೂ ಬಳಕೆಯಲ್ಲಿದೆ. ಈ ಸಂಪ್ರದಾಯ ಹಿಂದೂಗಳಲ್ಲಿ ಮಾತ್ರವಲ್ಲದೆ ಮುಸಲ್ಮಾನರಲ್ಲಿ ಮತ್ತು ಇತರರಲ್ಲಿ ಬಳಕೆಯಲ್ಲಿದೆ.[೬]

ಕೆಂಡ ಹಾಯುವುದಕ್ಕೆ ಸಂಬಂಧಿಸಿದಂತೆ ಕೆಲವಾರು ನಂಬಿಕೆಗಳನ್ನು ಗುರುತಿಸಬಹುದು. ದೇವರಲ್ಲಿ ಭಕ್ತಿ ಇದ್ದರೆ ಮಾತ್ರ ಕೆಂಡದ ಮೇಲೆ ಕಾಲು ಸುಡುದಂತೆ ನಡೆಯಲು ಸಾಧ್ಯ. ದೇವರಲ್ಲಿ ನಂಬಿಕೆಯಿಲ್ಲದಿದ್ದರೆ ಕಾಲು ಸುಡುತ್ತದೆ. ಪೂಜಾರಿಯ ಹಿಂದೆ ಹೋದವರಿಗೆ ಕಾಲು ಸುಡುವುದಿಲ್ಲ. ಆ ಪೂಜಾರಿ ತನ್ನಲ್ಲಿರುವ ಶಕ್ತಿಯನ್ನು ಉಳಿದವರಿಗೂ ಬರುವಂತೆ ಮಾಡಬಲ್ಲ. ಕೆಂಡ ಹಾಯುವುದು ದೇವರಿಗೆ ಮಾಡಿಕೊಂಡ ಹರಕೆಯನ್ನು ತೀರಿಸುವ ಒಂದು ಕ್ರಮ. ಕೆಂಡ ಹಾಯ್ದರೆ ದೇವರಿಗೆ ತೃಪ್ತಿಯಾಗುತ್ತದೆ. ವ್ಯಕ್ತಿ ಶುದ್ಧನಾಗುತ್ತಾನೆ ಈ ಬಗೆಯ ನಂಬಿಕೆಗಳಿವೆ.

ಕೆಂಡ ಹಾಯುವ ವ್ಯಕ್ತಿಗಳಲ್ಲಿ ಎಲ್ಲಾ ಬಗೆಯ ಜನರೂ ಇದ್ದಾರೆ. ಗಂಡಸರು, ಹೆಂಗಸರು ಮತ್ತು ಮಕ್ಕಳು ಕೆಂಡ ಹಾಯುತ್ತಾರೆ. ತಾವು ಮಾಡಿಕೊಂಡ ಹರಕೆಯನ್ನು ತೀರಿಸುವ ಸಲುವಾಗಿ ಕೆಲವರು, ತಮ್ಮ ವಂಶದಲ್ಲಿ ಪರಂಪರೆಯಿಂದ ನಡೆದು ಬಂದಿರುವ ಸಂಪ್ರದಾಯವೆಂದು ಕೆಲವರು ಕೆಂಡ ಹಾಯುತ್ತಾರೆ.[೪]

ಕಡಲಬಾಳು ಗ್ರಾಮದಲ್ಲಿ ರಥೋತ್ಸವದ ಮರುದಿನ (ಚೈತ್ರಶುದ್ಧ ಷಷ್ಠಿ) ಬೆಳಿಗ್ಗೆ ಅಗ್ನಿ ಪವಾಡ ಇರುತ್ತದೆ. ಹಿಂದಿನ ದಿನ ರಾತ್ರಿ ಎರಡು ಗಂಟೆಗೆ ಅಗ್ನಿಕೊಂಡದ ಮಣ್ಣನ್ನು ತೆಗೆದು ತಗ್ಗನ್ನು ತೋಡುತ್ತಾರೆ. ನಂತರ ಆಂಜನೇಯನ ಉತ್ಸವ ಮೂರ್ತಿಯನ್ನು ಪಾಲಕಿಯಲ್ಲಿ ವಾದ್ಯಗಳೊಂದಿಗೆ ಗಂಗೆಗೆ (ಹಳ್ಳ) ಹೋಗಿ ನೀರುತಂದು ಅಗೆದ ಅಗ್ನಿಕೊಂಡದ ನೆಲವನ್ನು ಸೆಗಣಿಯಿಂದ ಸಾರಿಸುತ್ತಾರೆ. ಊರಲ್ಲಿ ಭಕ್ತರ ಮನೆಗಳಿಗೆ ಹೋಗಿ ಕಟ್ಟಿಗೆ ಸಂಗ್ರಹಿಸಿ ಅವುಗಳನ್ನು ಅಗ್ನಿಕೊಂಡದಲ್ಲಿ ಒಟ್ಟುತ್ತಾರೆ. ನಂತರ ಪವಾಡ ಮಾಡುವ ಬಾಳಪ್ಪನು ಆ ಕಟ್ಟಿಗೆಗೆ ಪೂಜೆ ಮಾಡಿ ಗಂಧದ ಕಟ್ಟಿಗೆ ಸಹಾಯದಿಂದ ಅದಕ್ಕೆ ಬೆಂಕಿ ಹಚ್ಚುತ್ತಾನೆ. ನಂತರ ಅದರ ತುಂಬ ನಿಗಿ ನಿಗಿ ಕೆಂಡದ ಬೆಂಕಿ ತಯಾರಾಗುತ್ತದೆ. ಐದು ಅಡಿ ದೂರದಲ್ಲಿ ನಿಂತವರಿಗೂ ಬೆಂಕಿಯ ಝಳ ಬರುವಂತೆ ಇರುತ್ತದೆ. ಬೆಳಿಗ್ಗೆ ಐದು ಗಂಟೆಗೆ ಮಾರುತಿ ಉತ್ಸವ ಮೂರ್ತಿಯನ್ನು ಪಾಲಕಿಯಲ್ಲಿ ವಾದ್ಯಗಳೊಂದಿಗೆ ಗಂಗೆಗೆ ಹೋಗುತ್ತಾರೆ. ಅದರ ಜೊತೆಗೆ ಅಗ್ನಿಕೊಂಡದಲ್ಲಿ ಪ್ರವೇಶಿಸುವವರೂ ಹೋಗುತ್ತಾರೆ. ಅಲ್ಲಿ ಎಲ್ಲರೂ ಸ್ನಾನ ಮಾಡಿ ತೊಯ್ದ ಬಟ್ಟೆಯ ಮೇಲೆ ಬರುತ್ತಾರೆ. ಅಗ್ನಿಕೊಂಡದಲ್ಲಿ ಪ್ರವೇಶಿಸಲು ಎಲ್ಲಾ ಮತದವರು ಮತ್ತು ಚಿಕ್ಕಮಕ್ಕಳೂ ಸೇರಿ ಸುಮಾರು ನೂರು ಜನ ಮೇಲ್ಪಟ್ಟು ಇರುತ್ತಾರೆ. ಬೆಳಿಗ್ಗೆ ಆರು ಗಂಟೆಗೆ ಗಂಗೆಯಿಂದ ವಾಪಾಸು ಬರುತ್ತಾರೆ. ಇವರು ಬಹಳ ಮಡಿ ಮೈಲಿಗೆಯಿಂದ ಇರುತ್ತಾರೆ. ಹನುಮಪ್ಪನ ಆಯುಧಗಳನ್ನು ಅಗ್ನಿಕೊಂಡದಲ್ಲಿ ಪ್ರವೇಶಿಸುವವರು ಹಿಡಿದುಕೊಂಡಿರುತ್ತಾರೆ. ಅಷ್ಟೊತ್ತಿಗೆ ದೇವಸ್ಥಾನದಲ್ಲಿ ಜನಸ್ತೋಮವೇ ಸೇರಿರುತ್ತದೆ.

ಪವಾಡ ಮಾಡುವ ಬಾಳಪ್ಪ ಈ ಕೆಂಡದ ಮೇಲೆ ಬರಿಗಾಲಿನಿಂದ ಎರಡು ಸಲ ಹೋಗಿ ದೇವಸ್ಥಾನದ ಕಟ್ಟೆಯನ್ನು ಹತ್ತಿ ವಾಪಾಸು ಬರುತ್ತಾನೆ. ಮೂರನೇ ಸಲ ಹೋಗುವಾಗ ಆತನ ಹಿಂದೆ ಮಾರುತಿಯ ಉತ್ಸವ ಮೂರ್ತಿಯ ಪಾಲಕಿಯನ್ನು ಹೊತ್ತುಕೊಂಡ ಭಕ್ತರು ಬರಿಕಾಲಿನಿಂದ ಈ ಕೆಂಡದ ಮೇಲೆ ಹೋಗುತ್ತಾರೆ. ನಂತರ ಐದು ಜನ ದೇವದಾಸಿಯರು (ಹಿಂದೆ ಕೆಲವು ಹೆಣ್ಣು ಮಕ್ಕಳಿಗೆ ಮುದ್ರೆ ಹಾಕಿಸಿ ಆಂಜನೇಯನ ದೇವದಾಸಿಯರಾಗಿ ಬಿಡುವ ಪದ್ಧತಿ ಇತ್ತು. ಈಗಲೂ ಆ ದೇವದಾಸಿಯರನ್ನು ಊರಲ್ಲಿ ಕಾಣಬಹುದು. ಆದರೆ ಪ್ರಸ್ತುತ ದಿನಗಳಲ್ಲಿ ಈ ಪದ್ಧತಿ ಇಲ್ಲ. ಈ ದೇವದಾಸಿಯರು ಉತ್ಸವಗಳಲ್ಲಿ ಉತ್ಸವದ ಹಿಂದೆ ಚಾಮರ ಬೀಸುತ್ತ ಸಾಗಿರುತ್ತಾರೆ) ಮತ್ತು ಇತರರು ಬರಿಕಾಲಿನಿಂದ ಈ ಕೆಂಡದ ಮೇಲೆ ಹೋಗುತ್ತಾರೆ. ಎಲ್ಲರೂ ಆದಮೇಲೆ ನೆರೆದ ಭಕ್ತ ಸಮೂಹದವರು ಈ ಅಗ್ನಿಕೊಂಡವನ್ನು ಕೊಂಡ ತೆಗೆದ ಮಣ್ಣಿನಿಂದ ಎಲ್ಲರೂ ಮುಚ್ಚುತ್ತಾರೆ. ಅಗ್ನಿಕೊಂಡದಲ್ಲಿ ಹೋದ ಯಾರಿಗೂ ಏನೂ ತೊಂದರೆ ಆಗಿರುವುದಿಲ್ಲ. ನಂತರ ಪವಾಡ ಮಾಡುವ ಬಾಳಪ್ಪ ವಾದ್ಯ ಸಮೇತ

ಮನೆಗೆ ಹೋಗುವಾಗ ದಾರಿಯಲ್ಲಿ ಭಕ್ತರು ಮಲಗಿ ತಮ್ಮ ಸಮಸ್ಯೆಗಳನ್ನು ನಿವೇದಿಸಿಕೊಳ್ಳುತ್ತಾರೆ. ಆತನು ಭಕ್ತರನ್ನು ದಾಟುತ್ತಾ ಅವರ ಸಮಸ್ಯೆಗಳಿಗೆ ಪರಿಹಾರ ಸೂಚಿಸುತ್ತಾನೆ.

**ಮುಳ್ಳು ಪವಾಡ**

'ಅಪ್ಪಾ ನಿನ್ನ ಕಾಲು ತುಪ್ಪಕ್ಕಿನ್ನಾಮಿದವು. ಮತ್ತೆಲ್ಲಿ ತುಳಿದೆ ಹೊಸಮುಳ್ಳ' ಎಂದು ಊರಿನ ಜನಪದರು ಆಂಜನೇಯನನ್ನು ಕುರಿತು ಹಾಡುತ್ತಾರೆ.

ಮುಳ್ಳಿನ ಪವಾಡ ಇದೊಂದು ವಿಶಿಷ್ಟವಾದ ಜನಪದ ಆಚರಣೆ. ಉತ್ತರ ಕರ್ನಾಟಕದ ಅನೇಕ ಹಳ್ಳಿಗಳಲ್ಲಿ ಇಂದಿಗೂ ಇದನ್ನು ನಡೆಸುತ್ತಾರೆ. ಈ ಆಚರಣೆ ಹನುಮಂತ ದೇವರಿಗೆ ಸಂಬಂಧಿಸಿದ್ದು. ಸಾಮಾನ್ಯವಾಗಿ ಮುಳ್ಳು ಪವಾಡ ನಡೆಯುವ ಎಲ್ಲಾ ಊರುಗಳಲ್ಲಿ ಹನುಮಪ್ಪನ ಗುಡಿ ಇದ್ದೇ ಇರುತ್ತದೆ. ಮುಳ್ಳಿನ ಪವಾಡವನ್ನು ನಡೆಸುವವರು ಸಾಮಾನ್ಯವಾಗಿ ಹಿಂದುಳಿದ ವರ್ಗಕ್ಕೆ ಸೇರಿದ ಜನ. ನಾಯಕ ಅಥವಾ ವಾಲ್ಮೀಕಿ ಜನಾಂಗದವರಾಗಿರುವುದು ಸಾಮಾನ್ಯ. ಪವಾಡ ನಡೆಸುವ ಪೂಜಾರಪ್ಪನೂ ಆ ವರ್ಗದಿಂದಲೇ ಬಂದಿರುತ್ತಾನೆ. ಪೂಜಾರಪ್ಪನ ಸ್ಥಾನ ವಂಶಪಾರಂಪರ್ಯವಾಗಿರುವುದಿಲ್ಲ. ಮುಳ್ಳು ಪವಾಡ ನಡೆಯುವುದು ಚೈತ್ರಮಾಸದಲ್ಲಿ ಚಂದ್ರಮಾನ ಯುಗಾದಿಯ ನಂತರ ಐದನೇ ದಿನದಲ್ಲಿ. ಯುಗಾದಿಯ ದಿನದಿಂದಲೇ ಪೂಜಾರಪ್ಪನಿಗೆ ಉಪವಾಸ. ಆ ಐದು ದಿನ ಹಾಲು, ಸಕ್ಕರೆ ಬಿಟ್ಟು ಇನ್ನೇನೂ ತೆಗೆದುಕೊಳ್ಳುವಂತಿಲ್ಲ. ಮುಳ್ಳು ಪವಾಡವು ಹನುಮಪ್ಪನ ಗುಡಿ ಇರುವ ಎಲ್ಲಾ ಹಳ್ಳಿಗಳಲ್ಲಿಯೂ ಹಿಂದೆ ನಡೆಯುತ್ತಿತ್ತೆಂದು ಹೇಳುತ್ತಾರೆ. ಆದರೆ ಇಂದು ಕೆಲವು ಊರುಗಳಲ್ಲಿ ಮಾತ್ರ ನಡೆಯುತ್ತಿರುವುದನ್ನು ನಾವು ಕಾಣಬಹುದು.'

ಮೇಲೆ ತಿಳಿಸಿದ ಮುಳ್ಳು ಪವಾಡವು ಕಡಲಬಾಳು ಗ್ರಾಮದಲ್ಲಿ ಪ್ರತಿವರ್ಷ ಚೈತ್ರಮಾಸದಲ್ಲಿ ಆಂಜನೇಯನ ರಥೋತ್ಸವದ ಮರುದಿನ ಚೈತ್ರಶುದ್ಧ ಷಷ್ಠಿಯಂದು ಜರುಗುತ್ತದೆ. ಈ ಪವಾಡವನ್ನು ವೀಕ್ಷಿಸಲು ದೂರದ ಊರುಗಳಿಂದ ಅನೇಕ ಜನರು ಬರುತ್ತಾರೆ. ಈ ಪವಾಡ ಮಾಡುವ ಬಾಳಪ್ಪ ೩೫ ವರ್ಷಗಳಿಂದ ತನ್ನ ಸೇವೆಯನ್ನು ಸಲ್ಲಿಸುತ್ತಾ ಬಂದಿದ್ದಾನೆ.

**ಪವಾಡಪುರುಷ ಬಾಳಪ್ಪ :** ಕಣ್ಣೆಪ್ಪನ ಕೊನೆಯ ತಮ್ಮ ಬಾಳಪ್ಪ. ಈತನ ವೃತ್ತಿ ವ್ಯವಸಾಯ. ಈತನು ಸಹ ಆಂಜನೇಯನ ಭಕ್ತನಾಗಿದ್ದನು. ಸ್ವಾಮಿಯ ವಿವಿಧ ಸೇವೆಗಳಲ್ಲಿ ಭಾಗವಹಿಸುತ್ತಿದ್ದನು. ಕಣ್ಣೆಪ್ಪನ ಮರಣನಂತರ ಈ ವರ್ಷ ರಥೋತ್ಸವದ ಮರುದಿನ ಅಗ್ನಿಪವಾಡ ಮತ್ತು ಮುಳ್ಳುಪವಾಡ ಮಾಡಲು ಆಂಜನೇಯ ಯಾರನ್ನು ನೇಮಿಸಿಕೊಳ್ಳುತ್ತಾನೋ ಎಂದು ಊರಲ್ಲಿ ದೈವಸ್ಥರು ಮಾತನಾಡುತ್ತಿದ್ದರು. ಪವಾಡ ಮಾಡುವ ವ್ಯಕ್ತಿಯನ್ನು ದೈವಸ್ಥರು ನೇಮಿಸುವಂತಿಲ್ಲ. ಆಂಜನೇಯನೇ ಆತನನ್ನು ನೇಮಿಸಿಕೊಳ್ಳಬೇಕು. ನೇಮಿಸಿಕೊಳ್ಳುವುದಕ್ಕಿಂತ ಪೂರ್ವದಲ್ಲಿ ಆ ವ್ಯಕ್ತಿಗೆ ಮಾರುತಿ ಆವೇಶವಾಗಿ ಯಾವುದಾದರೊಂದು ಪವಾಡವನ್ನು ಮಾಡಿ ತೋರಿಸಬೇಕಿತ್ತು. ಆಗಲೇ ಯುಗಾದಿ ಹಬ್ಬ ಹತ್ತಿರ ಬಂದಿತ್ತು. ಆ ಸಮಯದಲ್ಲಿ ನಡೆದ ಘಟನೆ ಹೀಗಿದೆ.

**ಆಂಜನೇಯ ಒಲಿದದ್ದು :** ಬಾಳಪ್ಪ ಬಯಲಾಟದಲ್ಲಿ ಒಮ್ಮೆ ಆಂಜನೇಯನ ಪಾತ್ರ ಮಾಡಲು ಕೆಂಪು ಬಣ್ಣದ ಚಡ್ಡಿಯನ್ನು ಹೊಲಿಸಿದ್ದ. ಬಯಲಾಟ ಮುಗಿದ ನಂತರ ಅದನ್ನು ಪೆಟ್ಟಿಗೆಯಲ್ಲಿಟ್ಟು ಬೀಗ ಹಾಕಲಾಗಿತ್ತು. ಈತ ತನ್ನ ಹೊಲದಲ್ಲಿ ಕೆಲಸಮಾಡಲು ಎತ್ತುಗಳ ಜೊತೆ ಹೊಲಕ್ಕೆ ಹೋಗಿದ್ದ. ಎತ್ತುಗಳೊಂಟಗೆ ಹೊಲದಲ್ಲಿ ಹರಗುತ್ತಿದ್ದ ಸಮಯದಲ್ಲಿ ಮೈಮೇಲೆ ಮಾರುತಿ ಆವೇಶವಾಗಿ ಬಂದು ಹೊಲದ ಪಕ್ಕದಲ್ಲಿದ್ದ ಹಳ್ಳಿ ಹನುಮಪ್ಪನ ಗುಡಿಯಲ್ಲಿ ತಾನು ಧರಿಸಿದ್ದ ಬಟ್ಟೆಗಳನ್ನು ಬಿಚ್ಚಿ ಕೆಂಪು ಬಣ್ಣದ ಚೆಡ್ಡಿಯನ್ನು ಧರಿಸಿ ಹೊಲಗಳಲ್ಲಿ ಅಡ್ಡಬಿದ್ದು ಕಡಲಬಾಳು ಆಂಜನೇಯನ ದೇವಸ್ಥಾನದ ಕಡೆ ಓಡತೊಡಗಿದ. ಇದನ್ನು ಪಕ್ಕದ ಹೊಲದಲ್ಲಿ ಕೆಲಸ ಮಾಡುತ್ತಿದ್ದ ಜನರು ನೋಡಿ ಬಾಳಪ್ಪನ ಮೈಯಲ್ಲಿ ಆಂಜನೇಯ ದೇವರು ಬಂದಿದಾನೆ ಎಂದುಕೊಂಡು ಆತನ ಹಿಂದೆ ಅವರೂ ಓಡತೊಡಗಿದರು. ಬಾಳಪ್ಪ ಬರೀ ಕೆಂಪು ಬಣ್ಣದ ಚಡ್ಡಿ ಧರಿಸಿ ಓಡೋಡಿ ಬಂದಿರುವುದನ್ನು ಊರಿನ ಜನರು ನೋಡಿದರು. ಬಾಳಪ್ಪ ಆಂಜನೇಯನ ದೇವಸ್ಥಾನಕ್ಕೆ ಬಂದಾಗ ದೇವಸ್ಥಾನ ಗರ್ಭಗುಡಿಯ ಬಾಗಿಲು ಮುಚ್ಚಿ ಬೀಗ ಹಾಕಲಾಗಿತ್ತು. ಎರಡು ಬಾಗಿಲುಗಳ ಮಧ್ಯೆ ಸ್ವಲ್ಪ ಜಾಗ ಮಾತ್ರ ಇತ್ತು. ಬಾಳಪ್ಪ ಅದರ ಮೂಲಕವೇ ದೇವಸ್ಥಾನದ ಗರ್ಭಗುಡಿಯನ್ನು ಪ್ರವೇಶಿಸಿದ. ಆಗ ಊರಿನ ದೈವಸ್ಥರೆಲ್ಲಾ ದೇವಸ್ಥಾನದಲ್ಲಿ ಸೇರಿದರು. ಆಗ ಬಾಳಪ್ಪನನ್ನು ಕುರಿತು ವಿಚಾರಿಸಿದಾಗ ತಾನು ಇನ್ನು ಮುಂದೆ ಬ್ಯಾಟಗಿಡದ ದಿನ ಅಗ್ನಿಪವಾಡ ಮತ್ತು ಮುಳ್ಳಿನಪವಾಡ ನಡೆಸಿಕೊಂಡು ಹೋಗುವುದಾಗಿ ದೈವಸ್ಥರಿಗೆ ತಿಳಿಸಿದನು. ಅದಕ್ಕೆ ದೈವಸ್ಥರು ಒಪ್ಪಿಗೆ ನೀಡಿದರು. ಇತ್ತ ಮನೆಯವರು ಇದನ್ನು ಪರೀಕ್ಷಿಸಲು ಕೆಂಪು ಬಣ್ಣದ ಚೆಡ್ಡಿ ಇಟ್ಟಿದ್ದ ಪೆಟ್ಟಿಗೆಯನ್ನು ನೋಡಲಾಗಿ, ಆ ಪೆಟ್ಟಿಗೆಗೆ ಹಾಕಿದ ಬೀಗ ಹಾಕಿದ ಹಾಗೆಯೇ ಇತ್ತು. ಪೆಟ್ಟಿಗೆಯ ಬೀಗ ತೆಗೆದು ನೋಡಿದಾಗ ಅದರಲ್ಲಿ ಕೆಂಪು ಬಣ್ಣದ ಚೆಡ್ಡಿ ಇತ್ತು. ಬೀಗದ ಕೀಲಿ ಮನೆಯವರ ಬಳಿಯೇ ಇತ್ತು. ಹೀಗೆ ಆಂಜನೇಯಸ್ವಾಮಿ ಬಾಳಪ್ಪನನ್ನು ಪವಾಡ ಮಾಡಲು ನೇಮಿಸಿಕೊಂಡನು.

ಕ್ರಿ.ಶ. ೧೯೬೭ ರಿಂದ ಬಾಳಪ್ಪ ಅಗ್ನಿಪವಾಡ ಮತ್ತು ಮುಳ್ಳಿನಪವಾಡಗಳನ್ನು ಮಾಡಿಕೊಂಡು ಬಂದಿದ್ದಾನೆ. ಈತನು ಸಹ ತನ್ನ ಅಣ್ಣನಾದ ಕಡ್ಲೆಪ್ಪನ ಸಂಪ್ರದಾಯಗಳನ್ನು ಮುಂದುವರಿಸಿಕೊಂಡು ಬಂದಿದ್ದಾನೆ. ಈಗ ಈತನಿಗೆ ಅರವತ್ತೈದು ವರ್ಷ ವಯಸ್ಸು ಆಗಿದೆ. ಆದರೂ ಸಹ ಮೊದಲಿನಿಂದಲೂ ನಡೆದುಕೊಂಡು ಬಂದ ಪದ್ಧತಿಯಂತೆಯೇ ಬ್ಯಾಟಗಿಡದ ದಿನ ಪವಾಡಗಳನ್ನು ಮಾಡುತ್ತಾನೆ. ಮುಳ್ಳಿನಪವಾಡಕ್ಕೆ ಮುಂಚಿತವಾಗಿ ಪಾದಗಟ್ಟೆ ಹತ್ತಿರ ಹೋಗುವ ಮುನ್ನ ಕುಣಿಯುವಾಗ ಈತನ ಜೊತೆಗೆ ಸಹಾಯಕ್ಕಾಗಿ ನಾಯಕ ಜನಾಂಗದ ಮೂರು-ನಾಲ್ಕು ಜನ ಮುಖ್ಯಸ್ಥರು ಇರುತ್ತಾರೆ. ಆಂಜನೇಯನ ದೇವಸ್ಥಾನದ ಹಿಂದೆಯೇ ಆತನ ಮನೆಯಿದೆ. ಈತ ಆಂಜನೇಯನ ದೇವಾಸ್ಥಾನದಲ್ಲಿಯೇ ಹೆಚ್ಚಾಗಿ ಇರುತ್ತಾನೆ. ಈತ ಬೇರೆ ದಿನಗಳಲ್ಲಿ ಸಾಮಾನ್ಯ ಮನುಷ್ಯನಂತೆ ಕಂಡರೂ, ಆತನ ಮೈಯಲ್ಲಿ ಮಾರುತಿ ಆವೇಶವಾದಾಗ, ಪವಾಡ ಮಾಡುವಾಗ ಆಶ್ಚರ್ಯವಾಗುತ್ತದೆ.

ಈ ಪವಾಡವನ್ನು ನಡೆಸುವುದರಿಂದ ಆತನಿಗೆ ಹೆಚ್ಚಿನ ಲಾಭವೇನೂ ಇರುವುದಿಲ್ಲ. ಜನರ ಅಸ್ಪಷ್ಟವಾದ ಭಕ್ತಿಭಾವವನ್ನು ಬಿಟ್ಟರೆ ಜನರ ಭಕ್ತಿಯನ್ನು 'ಹಣ' ಮಾಡಿಕೊಳ್ಳುವ ಅತಿ ಬುದ್ಧಿವಂತಿಕೆ

ಪವಾಡ ಮಾಡುವ ವ್ಯಕ್ತಿಗೆ ಸಾಮಾನ್ಯವಾಗಿ ಇಲ್ಲದಿರುವುದರಿಂದ ಪ್ರತಿವರ್ಷ ಪವಾಡ ನಡೆಸಿಯೂ ಆತ ಬಡತನಕ್ಕಂಟಿಕೊಂಡೇ ಇರುವುದು ಹೆಚ್ಚು. ಮೇಲಾಗಿ ಆತನಿಗೆ ನಿರ್ಬಂಧಗಳು ಅಧಿಕ. ಆತನಲ್ಲಿ ದುಶ್ಚಟಗಳನ್ನು ಜನ ಸಹಿಸುವುದಿಲ್ಲ.

**ಬಾಳಪ್ಪನ ಪವಾಡಗಳು**

**೧. ಅಗ್ನಿಕೊಂಡದ ಮಣ್ಣಿನಲ್ಲಿ ಲಿಂಗ ತೋರಿಸಿದ್ದು :** ಬಾಳಪ್ಪನ ಮೈಮೇಲೆ ಒಮ್ಮೆ ಮಾರುತಿ ಆವೇಶವಾಗಿ ಅಗ್ನಿಕೊಂಡದಲ್ಲಿ ಲಿಂಗ ತೋರಿಸುವುದಾಗಿ ಹೇಳಿದನು. ಊರಿನ ದೈವಸ್ಥರು ಇದನ್ನು ಪರೀಕ್ಷಿಸಲು ಮಾರುತಿಯ ಉತ್ಸವ ಮೂರ್ತಿಯನ್ನು ಪಾಲಕಿಯಲ್ಲಿ ವಾದ್ಯಗಳ ಸಮೇತ ಗಂಗೆಗೆ ಹೋಗಿ ಬಂದ ನಂತರ ಬಾಳಪ್ಪ ದೇವಸ್ಥಾನದ ಮುಂದಿನ ಅಗ್ನಿಕೊಂಡದ ಮಣ್ಣನ್ನು ರಾಮಬಾಣದ ಸಹಾಯದಿಂದ ಮೂರು ಬಾರಿ ಅಗೆದು ಅದರಲ್ಲಿ ಲಿಂಗ ತೆಗೆದು ಊರಿನ ದೈವಸ್ಥರಿಗೆ ತೋರಿಸಿದನು. ಆ ಲಿಂಗವನ್ನು ಆಂಜನೇಯನ ದೇವಸ್ಥಾನದ ಗರ್ಭಗುಡಿಯಲ್ಲಿ ಕೆಲವು ಕಾಲ ಕಟ್ಟಲಾಗಿತ್ತು. ನಂತರ ಅದನ್ನು ಊರ ಗೌಡರಾದ ಪಾಟೇಲ್ ಗುರುಬಸವನಗೌಡರ ಮನೆಯಲ್ಲಿ ಕೊಡಲಾಯಿತು. ಊರಲ್ಲಿ ಮಳೆ ಹೋದಾಗ ಅದನ್ನು ಆಂಜನೇಯನ ಗುಡಿಯಲ್ಲಿಟ್ಟು ಕೆಲವು ದಿನ ಪೂಜಿಸುತ್ತಾರೆ. ಊರ ಗೌಡರ ಮನೆಯಲ್ಲಿ ಆ ಲಿಂಗ ಇಂದಿಗೂ ಪೂಜೆಗೊಳ್ಳುತ್ತಿದೆ.

**೨. ಪಾದಗಟ್ಟಿ ಆಂಜನೇಯನ ಹತ್ತಿರ ಕೆಂಪು ಬಣ್ಣದ ಆಂಜನೇಯನ ಚೆಡ್ಡಿ ತೋರಿಸಿದ್ದು:** ಒಮ್ಮೆ ಊರಲ್ಲಿ ಮಳೆ ಹೋದಾಗ ಊರಿನ ದೈವಸ್ಥರು ಆಂಜನೇಯನ ದೇವಸ್ಥಾನದಲ್ಲಿ ಪ್ರತಿದಿನ ರಾತ್ರಿ ರಾಮಭಜನೆ ಕಾರ್ಯಕ್ರಮ ಹಮ್ಮಿಕೊಂಡಿದ್ದರು. ಭಜನೆ ಮಾಡುವ ಸಂದರ್ಭದಲ್ಲಿ ಬಾಳಪ್ಪನೂ ಇರುತ್ತಿದ್ದ. ಆಗ ಬಾಳಪ್ಪನಿಗೆ ಮೈಮೇಲೆ ಮಾರುತಿ ಆವೇಶವಾಗಿ ಬಂದು ಪಾದಗಟ್ಟಿ ಹನುಮಪ್ಪನ ಹತ್ತಿರ ಆಂಜನೇಯನ ಕೆಂಪು ಬಣ್ಣದ ಚೆಡ್ಡಿ ಇದೆ ಎಂದು ಹೇಳಿದ. ಅದನ್ನು ಪರೀಕ್ಷಿಸಲು ಮೊದಲ ಬಾರಿಗೆ ನೋಡಲು ಹೋದಾಗ ಇರಲಿಲ್ಲ. ನಂತರ ಎರಡನೇ ಬಾರಿ ಹೋಗಿ ನೋಡಿರಿ ಎಂದಾಗ ಅಲ್ಲಿ ಯಾವುದೇ ಕೆಂಪು ಬಣ್ಣದ ಚೆಡ್ಡಿ ಇರಲಿಲ್ಲ. ನಂತರ ಮೂರನೇ ಬಾರಿ ಹೋಗಿ ನೋಡಿದಾಗ ಅಲ್ಲಿ ಆಂಜನೇಯನ ಕೆಂಪು ಬಣ್ಣದ ಚೆಡ್ಡಿ ಇತ್ತು.

ಮುಳ್ಳುಪವಾಡ ದಿನ ಮಧ್ಯಾಹ್ನ ಊರಿನ ನಾಯಕ ಜನಾಂಗದ ಮುಖಂಡರು ಒಂದು ಖಾಲಿ ಪಾಲಕಿಯನ್ನು (ಇದು ದೇವರು ಕೂಡುವ ಪಾಲಕಿಯಲ್ಲ, ಒಬ್ಬ ಮನುಷ್ಯ ಮಲಗುವಷ್ಟು ದೊಡ್ಡದಾದ ಪ್ರತ್ಯೇಕ ಪಾಲಕಿ.) ತೆಗೆದುಕೊಂಡು ಪಾದಗಟ್ಟಿ ಹನುಮಪ್ಪನ ಹತ್ತಿರವಿರುವ ಬೇವಿನಕಟ್ಟಿಗೆ ವಾದ್ಯಗಳ ಸಮೇತ ಹೋಗಿ ಅದರ ಮೇಲಿಡುತ್ತಾರೆ. ಆಗಲೇ ಅಲ್ಲಿ ಮೂರು ಮುಖದ ಕಾರಿ ಮುಳ್ಳಿನ ಗಿಡದ ಕಂಟೆಗಳನ್ನು ತಂದು ಬೇವಿನಕಟ್ಟೆಯ ಮೇಲಿಟ್ಟಿರುತ್ತಾರೆ. ಬ್ಯಾಟಿಗಿಡವನ್ನು ತೆಗೆದುಕೊಂಡು ಬಂದ ಬ್ಯಾಟೇರು ಮನೆತನದವರು ಸಹ ಅಲ್ಲಿ ಇರುತ್ತಾರೆ. ಖಾಲಿ ಪಾಲಕಿಯಲ್ಲಿ ಊರದೈವಸ್ಥರ ಸಮ್ಮುಖದಲ್ಲಿ ದಬ್ಬಣದಂತೆ ಚೂಪಾಗಿರುವ ಕಾರಿಮುಳ್ಳಿನ ಕಂಟೆಗಳನ್ನು ಪಾಲಕಿಯ ಮಧ್ಯದಲ್ಲಿ ಖಾಲಿಯಿರುವ ಜಾಗದಲ್ಲಿ ಹೊಂದಿಸುತ್ತಾರೆ. ನಂತರ ಆ ಪಾಲಕಿಯನ್ನು ಹೂವಿನಿಂದ ಅಲಂಕರಿಸಿ ಪೂಜೆ ಮಾಡುತ್ತಾರೆ.

ಆ ದಿನ ಪವಾಡ ಮಾಡುವ ಬಾಳಪ್ಪ ಮನೆಯಲ್ಲಿಯೇ ಇರುತ್ತಾನೆ. ಊರಿನ ದೈವಸ್ಥರು ಸಾಯಂಕಾಲ ಮೂರುಗಂಟೆಗೆ ಆತನ ಮನೆಗೆ ಬಂದು ತೊಟ್ಟಬಟ್ಟೆಯಲ್ಲಿಯೇ ಸ್ನಾನ ಮಾಡಿಸಿ ವಾದ್ಯಗಳ ಸಮೇತ ದೇವಸ್ಥಾನಕ್ಕೆ ಕರೆದುಕೊಂಡು ಬರುತ್ತಾರೆ. ಅಲ್ಲಿ ಆತನಿಗೆ ದೈವಸ್ಥರು ಹೊಲಿಸಿದ ಕೆಂಪು ಬಣ್ಣದ ಚೆಡ್ಡಿಯನ್ನು ತೊಡಿಸಿ, ಕೈಯಲ್ಲಿ ಬಾಣವನ್ನು ಕೊಡುತ್ತಾರೆ. ಆಗಲೇ ಆತನ ಮೈಮೇಲೆ ಮಾರುತಿ ಆವೇಶವಾಗುತ್ತಾನೆ. ನಂತರ ಭಕ್ತರು ಆತನ ಕೊರಳಲ್ಲಿ ಹೂವಿನ ಹಾರಗಳನ್ನು ಹಾಕಿದ ಮೇಲೆ ಆಂಜನೇಯನಿಗೆ ನಮಸ್ಕರಿಸಿ, ಓಡೋಡಿ ದೇವಸ್ಥಾನದ ಮುಂದಿನ ಗರುಡಗಂಭದ ಕಟ್ಟೆಯನ್ನು ಹತ್ತಿ ನಂತರ ಮಹಾದ್ವಾರದ ಹತ್ತಿರದ ನಾಲ್ಕು ಅಡಿ ಕಟ್ಟೆಯನ್ನು ಹತ್ತಿ ಕೆಳಗೆ ಹಾರುತ್ತಾನೆ. ಆತನ ಮುಂದೆ ಸನಾಯಿ, ಹಲಗೆ, ಸಮಾಳ ಮುಂತಾದ ವಾದ್ಯದವರಿರುತ್ತಾರೆ. ಅಲ್ಲಿಂದ ಆತ ಕುಣಿಯುತ್ತ, ಓಡುತ್ತಾ ಊರಿನ ಇತರ ದೈವಗಳಾದ, ಕಲ್ಲೇಶ್ವರ, ಊರಮ್ಮ, ದುರುಗಮ್ಮ, ಬಸವಣ್ಣರ ದರ್ಶನವನ್ನು ಪಡೆಯುತ್ತಾನೆ. ಈತ ಕುಣಿಯುವುದನ್ನು ನೋಡಲು ಜನಸಮೂಹವೇ ಸೇರಿರುತ್ತದೆ. ಸಮಾಳದ ನಾದಕ್ಕೆ ತಕ್ಕಂತೆ ಹೆಜ್ಜೆ ಹಾಕುತ್ತಾ ಕುಣಿಯುತ್ತಿರುತ್ತಾನೆ. ಆತನ ಹಿಂದೆ ಜನರ ಗುಂಪೇ ಇರುತ್ತದೆ. ಅಲ್ಲಿಂದ ಬಾಳಪ್ಪ ಪಾದಗಟ್ಟೆ ಹನುಮಪ್ಪನ ಹತ್ತಿರ ಬರುತ್ತಾನೆ. ಅಲ್ಲಿ ಆಗಲೇ ಸಾವಿರಾರು ಜನರು ನೆರೆದಿರುತ್ತಾರೆ. ಪಾದಗಟ್ಟೆ ಹನುಮಪ್ಪನ ಗುಡಿಯನ್ನು ಪ್ರದಕ್ಷಿಣೆ ಹಾಕಿ ಆತನಿಗೆ ನಮಸ್ಕರಿಸಿ ಮುಳ್ಳಿನ ಪಾಲಕಿ ಇಟ್ಟ ಬೇವಿಕಟ್ಟೆಯನ್ನು ಹತ್ತಿ ಇಡೀ ನೆರೆದ ದೈವಕ್ಕೆ ನಮಸ್ಕರಿಸಿ ಮುಳ್ಳಿನ ಪಾಲಕಿಯಲ್ಲಿ ಅಂಗಾತವಾಗಿ ಬೆನ್ನು ಕೆಳಗೆ ಮಾಡಿ ಮಲಗುತ್ತಾನೆ. ಅಲ್ಲಿಂದ ಆತ ಮಲಗಿದ ಪಾಲಕಿಯನ್ನು ಭಕ್ತರು ಹೊತ್ತುಕೊಂಡು ಭಜಂತ್ರಿ, ಡೊಳ್ಳು, ಹಲಗೆ, ಕಹಳೆ, ಸಮಾಳ ಮುಂತಾದ ವಾದ್ಯಗಳಿಂದ ಮೆರವಣಿಗೆಯಲ್ಲಿ ನಿಧಾನವಾಗಿ ಊರಿನೊಳಗೆ ಬರುತ್ತಾರೆ. ಹನುಮಪ್ಪನ ಐದು ಜನ ದೇವದಾಸಿಯರು ಆತನಿಗೆ ಬೀಸಣಿಕೆಯಿಂದ ಗಾಳಿ ಬೀಸುತ್ತಿರುತ್ತಾರೆ.

ಪಾಲಕಿಯ ಮುಂದೆ ಬ್ಯಾಟೇರು ಮನೆತನದವರು ಕಾರಿಮುಳ್ಳಿನ ಬ್ಯಾಟಗಿಡವನ್ನು ಹಿಡಿದುಕೊಂಡು ಕೇಕೆ ಹಾಕುತ್ತಾ ಕುಣಿಯುತ್ತಾರೆ. ಇವರು ಬಹಳ ಮಡಿ ಮೈಲಿಗೆಯಿಂದ ಇರುತ್ತಾರೆ. ನಂತರ ಆ ಮೆರವಣಿಗೆ ವೈದಿಕರ ವಾಸದ ಮನೆಯ ಮುಂದೆ ಬಂದಾಗ ರಸ್ತೆಯ ಅಂಚಿನಲ್ಲಿರುವ ಹನುಮಪ್ಪನ ಬೇವಿನಕಟ್ಟೆಯ ಮೇಲೆ ಪಾಲಕಿಯನ್ನು ಇಡುತ್ತಾರೆ. ಅಲ್ಲಿ ವೈದಿಕ ಮನೆತನದವರು ಪಾಲಕಿಯಲ್ಲಿ ಮಲಗಿರುವ ಬಾಳಪ್ಪನಿಗೆ ಮಂಗಳಾರತಿ ಮಾಡಿದ ಮೇಲೆ ಪಾಲಕಿಯನ್ನು ಗಂಗೆಗೆ ತೆಗೆದುಕೊಂಡು ಹೋಗಿ ಬಂದ ನಂತರ ಮಾರುತಿಯ ದೇವಸ್ಥಾನಕ್ಕೆ ಬಂದು ಮೂರು ಸಲ ಪ್ರದಕ್ಷಿಣೆ ಹಾಕಿ ದೇವಸ್ಥಾನದ ಗರ್ಭಗುಡಿಯ ಮುಂದೆ ಇಳಿಸುತ್ತಾರೆ. ಅಷ್ಟು ಹೊತ್ತಿಗೆ ಆತ ಮುಳ್ಳು ಪಾಲಕಿಯಲ್ಲಿ ಮಲಗಿ ನಾಲ್ಕು ತಾಸುಗಳಾದರೂ ಆಗಿರುತ್ತದೆ. ಅಷ್ಟು ಹೊತ್ತು ಮೈಮೇಲೆ ಎಚ್ಚರವಿಲ್ಲದಂತೆ ಕಣ್ಣು ಮುಚ್ಚಿ ಸ್ವಲ್ಪವೂ ಅಲುಗಾಡದಂತೆ ಮಲಗಿರುತ್ತಾನೆ. ದೇವಸ್ಥಾನದಲ್ಲಿ ಪಾಲಕಿ ಇಳಿಸಿದ ಕೂಡಲೇ ಮಂಗಳಾರತಿ ಮಾಡಿ ದೇವರ ನಾಮ ಸ್ಮರಣೆ ಮಾಡುತ್ತಾ ಆತನನ್ನು ಇಬ್ಬರು ಮೇಲೆತ್ತುತ್ತಾರೆ. ಆಗ ಬಾಳಪ್ಪ ಪಾಲಕಿಯಿಂದ ಎದ್ದು ನೆಲದ ಮೇಲೆ ನಿಲ್ಲುತ್ತಾನೆ. ಆಗ ಆತನ ಬೆನ್ನಿಗೆ ಮಾರುತಿಯ ಆದಾರವನ್ನು ಹಚ್ಚುತ್ತಾರೆ. ಅಷ್ಟು ಹೊತ್ತು ಮುಳ್ಳಿನ ಮೇಲೆ ಮಲಗಿದ್ದರೂ ಆತನ ಬೆನ್ನಿಗೆ ಯಾವುದೇ ರೀತಿಯ ಗಾಯ

ಆಗಿರುವುದಿಲ್ಲ, ರಕ್ತ ಕೂಡ ಬಂದಿರುವುದಿಲ್ಲ, ಮುಳ್ಳುಗಳು ಸಹ ಬಾಗಿರುವುದಿಲ್ಲ ಮತ್ತು ಮುರಿದಿರುವುದಿಲ್ಲ. ನಂತರ ಮೈಮೇಲೆ ಹಾಕಿಕೊಳ್ಳಲು ಒಂದು ಹೊಸ ಬಟ್ಟೆಯನ್ನು ದೈವಸ್ಥರು ಕೊಡುತ್ತಾರೆ. ಆಮೇಲೆ ಆತನನ್ನು ಊರಿನ ಗೌಡರ ಮನೆಗೆ ಕರೆದುಕೊಂಡು ಹೋಗುತ್ತಾರೆ. ಮುಂದೆ ಐದು ಜನ ದೇವದಾಸಿಯರು ಕಳಸವನ್ನು ಓಡಿದಿರುತ್ತಾರೆ. ಗೌಡರ ಮನೆಯಲ್ಲಿ ಎಣ್ಣೆಸ್ನಾನ ಮಾಡಿಸಿ ಹೊಸಬಟ್ಟೆ ಕೊಡುತ್ತಾರೆ. ಅವುಗಳನ್ನು ಆತ ಧರಿಸುತ್ತಾನೆ. ನಂತರ ಅವರ ಮನೆಯಲ್ಲಿಯೇ ಊಟ ಮಾಡುತ್ತಾನೆ. ಈತನ ಜೊತೆಗೆ ದೇವದಾಸಿಯರು, ದಾಸಯ್ಯ, ಮಾರುತಿ ಪೂಜಾರಿ ಸಹ ಊಟಮಾಡುತ್ತಾರೆ. ಅಂದಿಗೆ ಆತನ ಉಪವಾಸ ವ್ರತ ಕೊನೆಗೊಳ್ಳುತ್ತದೆ. ಅಲ್ಲಿಂದ ಆತ ವಾದ್ಯ ಸಮೇತ ಮನೆಗೆ ಬರುವಾಗ ಭಕ್ತರು ಕಾಲಿಗೆ ಬಿದ್ದು ಹಣವನ್ನು ಕಾಣಿಕೆ ರೂಪದಲ್ಲಿ ಸಲ್ಲಿಸುತ್ತಾರೆ.

ಮರುದಿನ ಬೆಳ್ಳಿಗೆ ಪವಾಡ ಮಾಡುವ ಬಾಳಪ್ಪ ಊರಿನ ಎಲ್ಲಾ ಮನೆಗಳಿಗೆ ದಾಸಯ್ಯರೊಂದಿಗೆ ಭಿಕ್ಷಾಟನೆಗೆ ಹೊರಡುತ್ತಾನೆ. ಭಕ್ತರು ಹಣ, ದವಸ-ಧಾನ್ಯಗಳ ರೂಪದಲ್ಲಿ ತಮ್ಮ ಕಾಣಿಕೆಯನ್ನು ಅರ್ಪಿಸಿ ಆತನ ಪಾದಗಳಿಗೆ ನಮಸ್ಕರಿಸುತ್ತಾರೆ. ಈ ಆಚರಣೆ ಇಂದಿಗೂ ಸ್ವಲ್ಪವೂ ವ್ಯತ್ಯಾಸವಾಗದ ಹಾಗೆ ನಡೆದುಕೊಂಡು ಬಂದಿದೆ.

ನಾವು ವೈಜ್ಞಾನಿಕವಾಗಿ ಚಿಂತನೆ ಮಾಡಿದಾಗ ಇವೆಲ್ಲವುಗಳಿಗೆ ಆಧಾರಗಳನ್ನು ನೀಡುವುದು ಕಷ್ಟ. ಆದರೂ ನಂಬಿಕೆ ಎನ್ನುವ ಮಾತು ಈ ಎಲ್ಲವುಗಳನ್ನು ನಾವು ಒಪ್ಪುವಂತೆ ಮಾಡುತ್ತದೆ. ನೋಡಲು ಕೇಳಲು ವಿಚಿತ್ರವೇ ಆದರೂ ಈ ಮುಳ್ಳುಪವಾಡದ ಆಚರಣೆ ನಡೆಯುವುದು ಸತ್ಯ. ಜಾತ್ರೆಯನ್ನು ನೋಡಲು ಜನ ಬರುವುದು ಕಡಿಮೆ ಆದರೆ ಈ ಮುಳ್ಳುಪವಾಡವನ್ನು ನೋಡಲು ಬರುವವರೇ ಹೆಚ್ಚು. ಕಾಕತಾಳೀಯವು ಸತ್ಯವಾದಾಗ ಅದಕ್ಕೆ ಜನಪದರು ದೇವರೆಂದು ನಂಬಿರುವುದೇ ಈ ಸಂಪ್ರದಾಯಗಳು ಪ್ರಚಲಿತದಲ್ಲಿರುವುದಕ್ಕೆ ಕಾರಣವಾಗಿವೆ.

'ಜಾನಪದ ಆಚರಣೆಗಳ ಹಿನ್ನೆಲೆಯಲ್ಲಿ ಸಾಮಾನ್ಯವಾಗಿ ಇರುವಂತೆ ಮುಳ್ಳುಪವಾಡದ ಹಿಂದೆ ಒಂದಲ್ಲ ಒಂದು ಭೌತಿಕ-ಸಾಮಾಜಿಕ ಅಗತ್ಯದ ದೃಷ್ಟಿ ಇದ್ದಿರಬೇಕು. ಕಾಲಕ್ರಮೇಣ ಈ ಸಿದ್ಧಾಂತ ಲುಪ್ತವಾಗಿ ಆಚರಣೆಯ ಬಾಹ್ಯರೂಪ ಮಾತ್ರ ಉಳಿದುಕೊಂಡಿರಬೇಕು. ಪವಾಡ ನಡೆಸಿಕೊಡುವ ಪೂಜಾರಪ್ಪನಿಗೂ ಈ ಸಿದ್ಧಾಂತದ ಪೂರ್ಣ ಅರಿವು ಇರುವುದು ಅನುಮಾನವೆ. ಇದನ್ನು ಜಾನಪದ ವಿದ್ವಾಂಸರು ತೀರ್ಮಾನಿಸಬೇಕಷ್ಟೆ'.[೧೦]

ಬ್ಯಾಟಿ (ಬೇಟೆ) ಗಿಡದ ಉತ್ಸವ

ರಥೋತ್ಸವದ ಮರುದಿನ ಚೈತ್ರಶುದ್ಧ ಷಷ್ಠಿಯಂದು ಬ್ಯಾಟಿಗಿಡದ ಆಚರಣೆ ಪುರಾತನ ಕಾಲದಿಂದಲೂ ನಡೆದುಕೊಂಡು ಬಂದಿದೆ. ಇದು ಆಂಜನೇಯ ಒಂದು ಸಂದರ್ಭದಲ್ಲಿ 'ಸಂಜೀವಿನಗಿಡ' ತಂದುದರ ಸಂಕೇತವಾಗಿದೆ. ಬ್ಯಾಟಿಗಿಡದ ಆಚರಣೆ ಎಂದಿನಿಂದ ಆರಂಭವಾಯಿತು ಎಂಬುವುದಕ್ಕೆ ನಮಗೆ ಆಧಾರಗಳು ಸಿಗುವುದಿಲ್ಲ. ಯುಗಾದಿಯ ನಂತರ ನಡೆಯುವ ಬ್ಯಾಟಿಗಿಡದ ಆಚರಣೆಯನ್ನು ನಾವು ಇಂದಿಗೂ ಅನೇಕ ಹಳ್ಳಿಗಳಲ್ಲಿ ಕಾಣಬಹುದು.

ಕಡಲಬಾಳು ಗ್ರಾಮದಲ್ಲಿ ಆಂಜನೇಯನ ರಥೋತ್ಸವದ ಮರುದಿನ ಮುಳ್ಳುಪವಾಡದ ಜೊತೆಗೆ ಬ್ಯಾಟಗಿಡದ ಆಚರಣೆ ಆಗುತ್ತದೆ. ಬ್ಯಾಟಗಿಡಕ್ಕೆ 'ಮೂರುಮುಖದ ಕಾರಿಮುಳ್ಳಿನಗಿಡ' ಎಂದು ಕರೆಯುತ್ತಾರೆ. ಬ್ಯಾಟಗಿಡವನ್ನು ಮುಂಚಿತವಾಗಿಯೇ ಕುದುರೆರ ಮನೆತನದವರು ಹುಡುಕಿರುತ್ತಾರೆ. ಅವರೇ ಪ್ರತಿವರ್ಷ ಬ್ಯಾಟಗಿಡವನ್ನು ತೋರಿಸುತ್ತಾರೆ. ಬ್ಯಾಟಗಿಡವನ್ನು ಅವರು ಪೂರ್ವದಿಕ್ಕಿಗೆ ಮಾತ್ರ ಹುಡುಕಬೇಕು ಎಂಬ ನಿಯಮವಿದೆ. ಅವರು ಬ್ಯಾಟಗಿಡದ ಹಿಂದಿನ ದಿನ ಆ ಗಿಡವನ್ನು ಪೂಜೆ ಮಾಡಿ ಸುತ್ತಲೂ ಅಗೆದು ಮೂಲಬೇರನ್ನು ಮಾತ್ರ ಬಿಟ್ಟು ಅದಕ್ಕೆ ನೀರನ್ನು ಹಾಕಿ ಬಂದಿರುತ್ತಾರೆ. ನಂತರ ಬ್ಯಾಟೀರು ಮನೆತನದವರಿಗೆ ಗಿಡ ಇರುವ ಸ್ಥಳವನ್ನು ತಿಳಿಸುತ್ತಾರೆ. ಆಗ ಬ್ಯಾಟೇರು ಮನೆತನದ ಮುಖಂಡರು ಮಾರುತಿಯ ಉತ್ಸವ ಮೂರ್ತಿಯನ್ನು ವಾದ್ಯಗಳ ಸಮೇತ ಪಾಲಕಿಯಲ್ಲಿ ಬ್ಯಾಟಗಿಡ ಇರುವ ಸ್ಥಳಕ್ಕೆ ಹೋಗಿ ಆ ಗಿಡವನ್ನು ಬೇರುಸಹಿತ ಕಿತ್ತುಕೊಂಡು ಬಂದು ಪಾದಗಟ್ಟಿ ಹತ್ತಿರವಿರುವ ಬೇವಿನಕಟ್ಟೆಯ ಹತ್ತಿರ ಇಡುತ್ತಾರೆ. ಬ್ಯಾಟಗಿಡ ತರಲು ಹೋದವರು ಮನೆಗೆ ಬಾರದೆ ಪಾದಗಟ್ಟಿ ಹತ್ತಿರವೇ ಇರುತ್ತಾರೆ. ಇವರು ಬಹಳ ಮಡಿಯಿಂದ ಇರುತ್ತಾರೆ. ಇವರು ಸಹ ಅಂದು ಒಂದು ಹೊತ್ತು ಉಪವಾಸ ಇರುತ್ತಾರೆ. ವಿಶಿಷ್ಟವೆಂದರೆ ಬ್ಯಾಟೇರು ಮನೆತನದವರು ಮಾತ್ರ ಈ ಆಚರಣೆಯಲ್ಲಿ ಭಾಗವಹಿಸುತ್ತಾರೆ. ಬಹಳ ಹಿಂದಿನ ಕಾಲದಿಂದಲೂ ಅವರಿಗೆ ಈ ಸೇವೆಸಲ್ಲಿಸುವ ಜವಾಬ್ದಾರಿ ವಹಿಸಲಾಗಿದೆ. ಆಂಜನೇಯನಿಗೆ ಬ್ಯಾಟಗಿಡದ ಸೇವೆ ಸಲ್ಲಿಸುವುದರಿಂದ ಅವರಿಗೆ ಬ್ಯಾಟೇರು ಮನೆತನದವರು ಎಂದು ಕರೆಯುತ್ತಾರೆ. ಊರಲ್ಲಿ ಬ್ಯಾಟೇರು ಮನೆತನದ ಸುಮಾರು ಮೂವತ್ತು ಮನೆಗಳಿವೆ.

ಮುಳ್ಳಿನಪವಾಡ ಮಾಡುವ ಬಾಳಪ್ಪ ಕುಣಿಯುತ್ತ ಪಾದಗಟ್ಟೆಯ ಹತ್ತಿರವಿರುವ ಬೇವಿನಕಟ್ಟೆಯ ಮೇಲಿನ ಮುಳ್ಳು ಪಾಲಕಿಯಲ್ಲಿ ಮಲಗಿದ ಕೂಡಲೇ ಇವರು ಬ್ಯಾಟಗಿಡವನ್ನು ಹಿಡಿದುಕೊಂಡು ಕುಣಿಯುತ್ತಾ, ಕೇಕೆ ಹಾಕುತ್ತಾ, ಮುಳ್ಳುಪಾಲಕಿಯ ಮುಂದೆ ಇರುತ್ತಾರೆ. ಬ್ಯಾಟಗಿಡ ಕುಣಿಯುವವರ ಮೇಲೆ ಭಕ್ತರು ನೀರನ್ನು ಹಾಕುತ್ತಾರೆ ಮತ್ತು ಹೂವಿನ ಹಾರಗಳನ್ನು ಇವರ ಕೊರಳಿಗೆ ಹಾಕುತ್ತಾರೆ. ಬ್ಯಾಟಗಿಡ ಹಿಡಿದುಕೊಂಡು ಕುಣಿಯುವವರ ಮೈ ಮೇಲೆ ಸಹ ಮಾರುತಿ ಆವೇಶವಾಗಿ ಬರುತ್ತಾನೆ. ಮುಳ್ಳುಪವಾಡ ನೋಡಲು ಬಂದ ಜನರಲ್ಲಿ ಯಾರಾದರೂ ಚಪ್ಪಲಿ ಧರಿಸಿದ್ದರೆ, ಛತ್ರಿ (ಕೊಡೆ) ಏರಿಸಿದ್ದರೆ ಅವರ ಮೈ ಮೇಲೆಯೇ ಬ್ಯಾಟಗಿಡವನ್ನು ಹಾಕಿಬಿಡುತ್ತಾರೆ. ಅಂದು ಜನರ ರಕ್ಷಣೆಗೆಂದು ಬಂದ ಪೋಲಿಸ್ ಸಿಬ್ಬಂದಿಯು ಸಹ ಅವರು ಧರಿಸಿದ ಬೂಟುಗಳನ್ನು ಕಳಚಿ ಬರಿಗಾಲಿನಲ್ಲಿರುತ್ತಾರೆ. ಬ್ಯಾಟಗಿಡ ಕುಣಿಯುತ್ತ ಊರಿನ ಮಧ್ಯಭಾಗದ ಆಂಜನೇಯನ ಬೇವಿನಕಟ್ಟೆಯ ಹತ್ತಿರ ಬಂದಾಗ ಬ್ಯಾಟಗಿಡವನ್ನು ಬೇವಿನಕಟ್ಟೆಯ ಮೇಲಿಟ್ಟು ಪೂಜಿಸುತ್ತಾರೆ. ಮುಳ್ಳುಪಾಲಕಿ ಜೊತೆಗೆ ಗಂಗೆಗೆ ಹೋಗಿ ಬಂದ ನಂತರ ಬ್ಯಾಟಗಿಡ ಕುಣಿಯುವವರು ಮೂರುಸಲ ದೇವಸ್ಥಾನವನ್ನು ಪ್ರದಕ್ಷಿಣೆ ಹಾಕಿ ಬ್ಯಾಟಗಿಡವನ್ನು ದೇವಸ್ಥಾನದ ಹಿಂದೆ ಇಡುತ್ತಾರೆ.

**ಒಕಳಿ ಹೊಂಡ ಹಾರುವುದು**

ಮುಳ್ಳುಪವಾಡದ ಮರುದಿನ ಆಂಜನೇಯನ ದೇವಸ್ಥಾನದಲ್ಲಿ ಒಕಳಿ ಹೊಂಡ ಹಾರುವ ಕಾರ್ಯಕ್ರಮ ಜರುಗತ್ತದೆ. ಇದು ಆಂಜನೇಯ ಸಮುದ್ರ ಹಾರಿದ ಸಂಕೇತವಾಗಿದೆ. ಅಂದು ದೇವಸ್ಥಾನದ ಮುಂದೆ ಇರುವ ಒಕಳಿ ಹೊಂಡದ ಮೇಲೆ ತೆಂಗಿನಗರಿಯ ಚಪ್ಪರವನ್ನು ಹಾಕಿ ಮಧ್ಯದಲ್ಲಿ ತೆಂಗಿನಕಾಯಿನ್ನು ಕಟ್ಟಿರುತ್ತಾರೆ. ನಂತರ ಒಕಳಿ ಹೊಂಡದ ನಾಲ್ಕು ಮೂಲೆಗೂ ಪೂಜೆ ಮಾಡಿ ನೈವೆದ್ಯ ಅರ್ಪಿಸುತ್ತಾರೆ. ಪವಾಡ ಮಾಡುವ ವ್ಯಕ್ತಿ ಮೂರು-ನಾಲ್ಕು ಸಾರಿ ಹಾರಿ ಒಕಳಿ ಹೊಂಡದ ಮೇಲೆ ತೆಂಗಿನ ಚಪ್ಪರದ ಮಧ್ಯಭಾಗದಲ್ಲಿ ಕಟ್ಟಿರುವ ತೆಂಗಿನಕಾಯಿಯನ್ನು ಹರಿಯುತ್ತಾನೆ. ಆಗ ಊರಿನ ದೈವಸ್ಥರು ಆತನಿಗೆ ಹೊಸ ಬಟ್ಟೆ ಮತ್ತು ಹರಿದ ತೆಂಗಿನಕಾಯಿಯನ್ನು ಕೊಡುತ್ತಾರೆ. ಅಲ್ಲಿ ಕೆಲಸ ಮಾಡಿದ ತಳವಾರನಿಗೂ ಸಹ ಹೊಸ ಬಟ್ಟೆಯನ್ನು ಕೊಡುತ್ತಾರೆ. ಹಿಂದೆ ಈ ಆಚರಣೆ ಜಾರಿಯಲ್ಲಿತ್ತು. ಆದರೆ ಈಗ ಸಂಪ್ರದಾಯಿಕವಾಗಿ ಮಾತ್ರ ಮಾಡುತ್ತಾರೆ.

**ಕಡುಬಿನ ಕಾಳಗ**



ಅಂದು ರಾತ್ರಿ ಒಂಭತ್ತು ಗಂಟೆಗೆ ದೇವಸ್ಥಾನದಲ್ಲಿ ಕಡುಬಿನ ಕಾಳಗದ ಕಾರ್ಯಕ್ರಮ ಇರುತ್ತದೆ. ಬೇಟೆಗೆಂದು ಹೋಗಿ ಬಂದ ಶ್ರೀರಾಮಚಂದ್ರನಿಗೂ ಹಾಗೂ ಅರಮನೆಯಲ್ಲಿದ್ದ ಸೀತಾಮಾತೆಯ ನಡುವೆ ಜರುಗುವ ಚಮತ್ಕಾರವಾದ ವಿವಾದವೇ ಈ ಕಡುಬಿನ ಕಾಳಗದ ತಿರುಳಾಗಿದೆ.



ಶ್ರೀರಾಮಚಂದ್ರ ಬೇಟೆಗೆ ಹೋಗುವ ಸಂದರ್ಭದಲ್ಲಿ ತನ್ನ ಹೆಂಡತಿಯಾದ ಸೀತಾದೇವಿಗೆ ಯಾರೂ ಬಂದರೂ ಕದವನ್ನು ತೆಗೆಯಬೇಡ ಎಂದು ಹೇಳಿ ಹೋಗಿರುತ್ತಾನೆ. ಶ್ರೀರಾಮಚಂದ್ರ ಬೇಟೆಯಿಂದ ವಾಪಾಸು ಬಂದಾಗ ಸಮಯ ಬಹಳ ಆಗಿರುತ್ತದೆ. ದೇವಸ್ಥಾನದ ಬಾಗಿಲು ಹಾಕಿದಾಗ ಬಾಗಿಲು ತೆಗೆ ಎಂದು ಗಂಡಿನ ಕಡೆಯವರು ಹೇಳಿ ಕಳಿಯಿಸುತ್ತಾರೆ. ಆದರೆ ಸೀತೆಯ ಕಡೆಯ ಹೆಣ್ಣಿನವರು 'ಶ್ರೀರಾಮಚಂದ್ರ ಯಾರೂ ಬಂದರೂ ಬಾಗಿಲು ತೆಗೆಯಬೇಡ ಎಂದು ಹೇಳಿದ್ದಾನೆ ಮತ್ತು ಈಗಾಗಲೇ ಸಮಯ ಬಹಳ ಆಗಿದೆ ಬಾಗಿಲು ತೆಗೆಯುವುದಿಲ್ಲ' ಎಂದು ಹೇಳುತ್ತಾರೆ. ಹೆಣ್ಣಿನ ಕಡೆಯವರು, ಗಂಡಿನ ಕಡೆಯವರು ಎಂದು ಎರಡು ಭಾಗವಾಗಿ ಗಲಾಟೆ ಮಾಡುತ್ತಾರೆ. ಒಂದು ಕಡೆ ಶ್ರೀರಾಮಚಂದ್ರನ ಪಾಲಕಿಯನ್ನು ಹೊತ್ತ ಗಂಡಿನವರು, ಇನ್ನೊಂದು ಕಡೆ ಬಾಗಿಲು ಹಾಕಿಕೊಂಡು ಕಟ್ಟೆಯ ಮೇಲೆ ಕುಳಿತ ಹೆಣ್ಣಿನ ಕಡೆಯವರು. ಗಂಡಿನ ಕಡೆಯವರು ನಾವು ಬಂದಿದ್ದೇವೆ ಬಾಗಿಲು ತೆಗೆಯಿರಿ ಎಂದು ಹೇಳಿ ಕಳುಹಿಸಿದಾಗ ಹೆಣ್ಣಿನ ಕಡೆಯವರು ಯಾರು ಎಂದು ಹೆಸರು ಕೇಳಿಕೊಂಡು ಬನ್ನಿ ಎಂದು ಹೇಳುತ್ತಾರೆ. ಆಗ ಗಂಡಿನ ಕಡೆಯವರು ಈ ರೀತಿ ಹೇಳುತ್ತಾರೆ.



**ವಸಂತ ಬಂದಾನ** : ವಸಂತ ಬಂದಾನೆಂದು ಹೇಳಿರಿ ಎಂದು ಗಂಡಿನವರು ಹೇಳಿದಾಗ ಹೆಣ್ಣಿನವರು ಈ ಬಿಸಿಲಿನ ಮಟಮಟ ಮಧ್ಯಾಹ್ನದಲ್ಲಿ ಋತುವಿನ ವಸಂತ ಎಲ್ಲಿ ಬರುತ್ತಾನೆ. ಈ ಕತ್ತಲೆಯಲ್ಲಿ ಶಶಿ ಹುಟ್ಟಿದ್ದಾನೆ. ವಸಂತ ಬರಲಿಕ್ಕೆ ಆತನಿಗೆ ಹೊತ್ತು ಗೊತ್ತು ಇಲ್ಲವೇನು? ನಡೆಯಿರಿ ಎಂದು ಹೆಣ್ಣಿನವರು ಹೇಳುತ್ತಾರೆ.

**ಚಕ್ರಪಿ ಬಂದಾನ** : ಎಂದು ಗಂಡಿನವರು ಹೆಣ್ಣಿನ ಹತ್ತಿರ ಹೋದಾಗ ಚಕ್ರಿ ಎಂದರೆ ಕುಂಬಾರ. ಕುಂಬಾರನಿಗೆ ಇಲ್ಲಿ ಏನೂ ಕೆಲಸವಿಲ್ಲ. ಕುಂಬಾರರ ಹತ್ತಿರ ಹೋಗಿ ಗಡಿಗಿ ಮಾಡಿ ಜಾತ್ರೆಯಲ್ಲಿ ಮಾರುವುದಕ್ಕೆ ಹೇಳಿರಿ ಎಂದು ಹೆಣ್ಣಿನವರು ಹಾಸ್ಯ ಮಾಡುತ್ತಾರೆ.

**ಜನಾರ್ಧನ ಬಂದಾನ** : ಎಂದು ಅಂದಾಗ ಹೆಣ್ಣಿನ ಕಡೆಯವರು ಜನಾರ್ಧನ ಅಂದರೆ ಯಮ. ಇಲ್ಲಿ ಯಾರಿಗೂ ಕಷ್ಟವಿಲ್ಲ. ಎಲ್ಲರೂ ಚೆನ್ನಾಗಿದ್ದೇವೆ. ಯಮನಿಗೆ ಇಲ್ಲಿ ಕೆಲಸವಿಲ್ಲ. ಸ್ಮಶಾನಕ್ಕೆ ಹೋಗಲಿಕ್ಕೆ ಹೇಳಿರಿ ಎಂದು ಬಯ್ಯುತ್ತಾರೆ.

**ಶೇಷಶಾಹಿ ಬಂದಾನ** : ಎಂದು ಹೇಳಿದರೆ ಸೀತೆಯ ಕಡೆಯವರು. ಶೇಷ ಅಂದರೆ ಹಾವು. ಹಾವು ಬಂದರೆ ಏನು ಮಾಡಬೇಕು? ಇಲ್ಲಿ ಹುತ್ತ ಕಟ್ಟಲಿಕ್ಕೆ ಆಗುವುದಿಲ್ಲ. ಎಲ್ಲಾದರೂ ಹೋಗಿ ತನ್ನ ಜಾಗ ಹುಡುಕಿಕೊಳ್ಳುವುದಕ್ಕೆ ಹೇಳಿರಿ ಎಂದು ಹೇಳುತ್ತಾರೆ.

**ಗೋಪಾಲ ಬಂದಾನ** : ಎಂದಾಗ ಸೀತೆಯ ಕಡೆಯವರು ದನ ಕಾಯುವವನಿಗೆ ಇಲ್ಲಿ ಕೆಲಸವಿಲ್ಲ. ಮೇವು ಇಲ್ಲ, ನೀರು ಇಲ್ಲ, ಗೋವುಗಳನ್ನು ಕಾದು ತೋಟದಲ್ಲಿ ಹೋಗಿ ಇರುವುದಕ್ಕೆ ಹೇಳಿರಿ ಎಂದು ಹೇಳುತ್ತಾರೆ. ಇದೇ ರೀತಿ ಮುಂದುವರೆದು ಕೊನೆಗೆ,

**ಸಾಕ್ಷಾತ್ ಶ್ರೀರಾಮಚಂದ್ರ ಬಂದಿದ್ದಾನೆ ಬಾಗಿಲು ತೆಗೆಯಿರಿ** : ಅಂದಾಗ ಹೆಣ್ಣಿನ ಕಡೆಯವರು ಆತನ ಕೈಯಲ್ಲಿ ಮುದ್ರೆ ಉಂಗುರ ಇದೆಯಾ? ಎಂದು ಕೇಳಿದಾಗ ಗಂಡಿನ ಕಡೆಯವರು ಇದೆ ಎಂದು ಹೇಳುತ್ತಾರೆ. ಮೊದಲೇ ಈ ಮಾತು ಹೇಳಬೇಕಾಗಿತ್ತು. ನಾವು ಆಗಲೇ ಬಾಗಿಲನ್ನು ತೆಗೆಯುತ್ತಿದ್ದೇವು. ಇಷ್ಟು ಗೋಳಾಡಿಸುತ್ತಿರಲಿಲ್ಲ ಎಂದು ಹೇಳುತ್ತಾರೆ. ನಂತರ ಶ್ರೀರಾಮಚಂದ್ರನಿಗೆ ಇನ್ನು ಮುಂದೆ ತಡವಾಗಿ ಬರದಂತೆ ಎಚ್ಚರಿಸಿ ದೇವಸ್ಥಾನದ ಬಾಗಿಲು ತೆಗೆಯುತ್ತಾರೆ.

ಹೀಗೆ ಕಡಬಿನ ಕಾಳಗದ ಆಚರಣೆ ಮುಕ್ತಾಯವಾಗುತ್ತದೆ.

**ಓಕಳಿ (ಅವಭೃತಸ್ನಾನ)**

ಕಡಬಿನ ಕಾಳಗದ ನಂತರ ಬೆಳಿಗ್ಗೆ ಓಕಳಿ ಕಾರ್ಯಕ್ರಮ ಇರುತ್ತದೆ. ಇದು ಆಂಜನೇಯ ಜಾತ್ರೆಯ ಕೊನೆಯ ಕಾರ್ಯಕ್ರಮವಾಗಿದೆ. ಆಗ ಮಾರುತಿ ಉತ್ಸವ ಮೂರ್ತಿಯೊಂದಿಗೆ ಪಾಲಕಿಯಲ್ಲಿ ವಾದ್ಯ ಸಮೇತ ಊರ ಮುಂದಿನ ಪಾದಗಟ್ಟಿ ಆಂಜನೇಯ ಹತ್ತಿರ ಹೋಗುತ್ತಾರೆ. ಹೋಗುವ ಸಂದರ್ಭದಲ್ಲಿ ದಾರಿಯಲ್ಲಿ ಸಿಗುವ ವ್ಯಕ್ತಿಗಳಿಗೆ ದೇವರ ಓಕುಳಿಯನ್ನು ಹಾಕುತ್ತಾರೆ. ಮನೆಯ ಮುಂದೆ ಕುಳಿತವರ ಮೇಲೆ ಸಹ ಓಕಳಿ ಹಾಕುತ್ತಾರೆ. ನಂತರ ಪಾದಗಟ್ಟಿ ಹತ್ತಿರ ಹೋಗಿ ಆಂಜನೇಯನಿಗೆ ಮಂಗಳಾರತಿ ಮಾಡಿಸಿಕೊಂಡು ಬಂದು ಗಂಗೆಗೆ ಹೋಗುತ್ತಾರೆ. ಅಲ್ಲಿ ಕಟ್ಟಿಕೊಂಡಿದ್ದ ಕಂಕಣಬಿಚ್ಚಿ (ವಿಸರ್ಜನೆ) ಗಂಗೆಯಲ್ಲಿ ಹಾಕಿ ಸ್ನಾನ ಮಾಡುತ್ತಾರೆ. ನಂತರ ಉತ್ಸವ ಮೂರ್ತಿಯೊಂದಿಗೆ ಆಂಜನೇಯನ ದೇವಸ್ಥಾನಕ್ಕೆ ಬಂದು ಆಂಜನೇಯ ಮೂರ್ತಿಯನ್ನು ಮೂಲಸ್ಥಾನಕ್ಕೆ ಕೂಡಿಸುತ್ತಾರೆ.

ಹೀಗೆ ಜಾತ್ರೆಯ ಕಾರ್ಯಕ್ರಮಗಳು ಬಿದಿಗಿಯಿಂದ ಆರಂಭವಾಗಿ ಆಗಮೋಕ್ತವಾದ ಎಲ್ಲಾ ವಿಧಿ ವಿಧಾನಗಳಿಂದ ಐದು ದಿನ ಉತ್ಸವ ಜರುಗಿ ಆರನೇ ದಿನ ಅವಭೃತಸ್ನಾನದೊಂದಿಗೆ ಮುಕ್ತಾಯವಾಗುತ್ತದೆ.

ಕಡಲಬಾಳು ಆಂಜನೇಯ ಸ್ವಾಮಿಯ ಜಾತ್ರೆಯು ಸುತ್ತಮುತ್ತಲ ಹಳ್ಳಿಗಳಿಗೆಲ್ಲಾ ಪ್ರಸಿದ್ಧಿಯನ್ನು ಪಡೆದಿದೆ. ದೂರದ ಊರುಗಳಿಂದ ಅನೇಕ ಭಕ್ತರು ಬರುತ್ತಾರೆ. ಬಂದು ತಮ್ಮ ಹರಕೆಯನ್ನು ಒಪ್ಪಿಸುತ್ತಾರೆ. ರಥೋತ್ಸವಕ್ಕಿಂತ ಮುಳ್ಳುಪವಾಡ ದಿನ ಹೆಚ್ಚಿನ ಸಂಖ್ಯೆಯಲ್ಲಿ ಭಕ್ತರು ಬರುತ್ತಾರೆ. ಇಲ್ಲಿ ನಡೆಯುವಂತ ಮುಳ್ಳುಪವಾಡವು ಸುತ್ತಮುತ್ತಲು ಎಲ್ಲಿಯೂ ನಡೆಯುವುದಿಲ್ಲ. ಇದೇ ಕಡಲಬಾಳು ಆಂಜನೇಯಸ್ವಾಮಿ ವೈಶಿಷ್ಟತೆಯಾಗಿದೆ.

ಜಾತ್ರೆಯ ಸಂದರ್ಭದಲ್ಲಿ ಹಳ್ಳಿ ಜನರು ಜಾತಿಮತ ತಾರತಮ್ಯವಿಲ್ಲದೆ ಬೆರೆಯುತ್ತಾರೆ. ಆಂಜನೇಯನ ಜಾತ್ರೆಯನ್ನು ಊರಲ್ಲಿ ಎಲ್ಲಾ ಜನಾಂಗದವರು ಸೇರಿಯೇ ಆಚರಿಸುತ್ತಾರೆ. ಜಾತ್ರೆಗೆ ಮುನ್ನ ಪಟ್ಟಿಯ ಮುಖಾಂತರ ಊರಲ್ಲಿ ಎಲ್ಲಾ ಜನಾಂಗದವರಿಂದ ಹಣ ಸಂಗ್ರಹಿಸುತ್ತಾರೆ. ಊರಿನ ಎಲ್ಲಾ ವರ್ಗದ ಜನರೂ ಸ್ವಾಮಿಯ ಸೇವೆಯಲ್ಲಿ ಪಾಲ್ಗೊಳ್ಳುತ್ತಾರೆ ಮತ್ತು ಉಚಿತವಾಗಿ ದೇವಸ್ಥಾನದ ಕೆಲಸಗಳನ್ನು ಸಹ ಮಾಡುತ್ತಾರೆ. ಗ್ರಾಮದ ಮತ್ತು ಸುತ್ತಮುತ್ತಲಿನ ಹಳ್ಳಿಗಳ ಜನರಿಗೆ ಇದೊಂದೆ ದೊಡ್ಡ ಜಾತ್ರೆ. ಈ ಜಾತ್ರೆಗೆ ಊರಿನ ಎಲ್ಲಾ ವರ್ಗದ ಜನರೂ ತಮ್ಮ ದೂರದ ಊರಿನ ಬಂಧು, ಬಳಗದವರನ್ನು ಕರೆದುಕೊಂಡು ಬರುತ್ತಾರೆ.

ಜಾತ್ರಿಗೆ ಸೇರುವ ಜನರನ್ನು ನೋಡಿದರೆ ಜನರು ದೈವದ ಆಚರಣೆಗಳ ಮೇಲೆ ಇಟ್ಟಿರುವ ನಂಬಿಕೆ ವ್ಯಕ್ತವಾಗುತ್ತದೆ. ಜಾತ್ರೆಯ ಸಂದರ್ಭದಲ್ಲಿ ಜನರು ಎಲ್ಲಾ ಕಷ್ಟಗಳನ್ನು ಮರೆತು ಸಂತೋಷದಿಂದ ಇರುತ್ತಾರೆ. ಆದುದರಿಂದ ಜಾತ್ರೆಗಳು ಭಕ್ತಿ ಪರಂಪರೆಯನ್ನು ಮುಂದುವರೆಸುತ್ತಿರುವ ಭಾವನೆಯನ್ನು ಹುರಿಗೊಳಿಸಿ ಸ್ಥಿರೀಕರಿಸುತ್ತವೆ ಎಂದರೆ ತಪ್ಪಾಗಲಾರದು.

ಕರ್ನಾಟಕದ ಪ್ರತಿಯೊಂದು ಹಳ್ಳಿಗಳಲ್ಲಿಯೂ ಜಾತ್ರೆಗಳ ಆಚರಣೆಯನ್ನು ನಾವು ಕಾಣಬಹುದು. ಜಾತ್ರೆ ಆಚರಿಸದ ಹಳ್ಳಿಯೇ ಇಲ್ಲ. ತಮ್ಮ ಊರಲ್ಲಿನ ದೈವದ ಜಾತ್ರೆ ಆಚರಿಸದಿದ್ದರೆ ಪಕ್ಕದ ಊರಿನ ದೈವದ ಜಾತ್ರೆಯನ್ನಾದರೂ ಆಚರಿಸುತ್ತಾರೆ. ಇದರಿಂದ ನಮಗೆ ನಮ್ಮ ಜನಪದರಿಗೂ ಮತ್ತು ಜಾತ್ರೆಗೂ ಇರುವ ನಿಕಟ ಸಂಬಂಧ ಮತ್ತು ಮಹತ್ವ ತಿಳಿದು ಬರುತ್ತದೆ.

## ೫. ಶ್ರಾವಣಮಾಸದಲ್ಲಿ

ಶ್ರಾವಣಮಾಸದಲ್ಲಿ ಆಂಜನೇಯಸ್ವಾಮಿ ದೇವಸ್ಥಾನದಲ್ಲಿ ಹೆಚ್ಚಿನ ಕಾರ್ಯಕ್ರಮಗಳು ನಡೆಯುತ್ತವೆ. ಒಂದು ತಿಂಗಳ ಅವಧಿಯಲ್ಲಿ ಅನೇಕ ಆಚರಣೆಗಳು ಜರುಗುತ್ತವೆ. ಈ ಸಂದರ್ಭದಲ್ಲಿ ಜರುಗುವ ಕೆಲವು ಪ್ರಮುಖ ಆಚರಣೆಗಳನ್ನು ಈ ಕೆಳಕಂಡಂತೆ ವಿವರಿಸಬಹುದು.

**ನಾಗರಪಂಚಮಿ :** ಈ ಹಬ್ಬದಲ್ಲಿ ಆಂಜನೇಯಸ್ವಾಮಿಗೆ ಆಭರಣ ಪೂಜೆ ಮಾಡಿರುತ್ತಾರೆ. ಬೆಳ್ಳಿ ಮತ್ತು ಬಂಗಾರದ ಆಭರಣಗಳನ್ನು ಆತನ ಮೈ ಮೇಲೆ ಹಾಕಿರುತ್ತಾರೆ. ಭಕ್ತರು ಹರಕೆ ರೂಪದಲ್ಲಿ ಒಪ್ಪಿಸಿದ ಆಭರಣಗಳನ್ನು ಸಹ ಹಾಕಿರುತ್ತಾರೆ. ಕೆಲವು ಭಕ್ತರು ಅಂದು ಕುಂಕುಮ ಪೂಜೆ ಮತ್ತು ಎಲೆ ಪೂಜೆಯನ್ನು ಸಹ ಮಾಡಿಸಿರುತ್ತಾರೆ. ಅಂದು ಊರಿನ ಪ್ರತಿಯೊಂದು ಭಕ್ತರು ಆಂಜನೇಯನ ದೇವಸ್ಥಾನಕ್ಕೆ ಬಂದು ನೈವೇದ್ಯ ಅರ್ಪಿಸಿ ಮಂಗಳಾರತಿ ಮಾಡಿಸಿಕೊಂಡು ಹೋಗುತ್ತಾರೆ. ಅಂದು ಆಂಜನೇಯನ ದೇವಸ್ಥಾನದಲ್ಲಿ ನಾಗಪ್ಪನ ಹುತ್ತ ಮುರಿಯುವ ಕಾರ್ಯಕ್ರಮವಿರುತ್ತದೆ.

**ತಿಮ್ಮಪ್ಪನ ಗುಡ್ಡಕ್ಕೆ ಹೋಗುವುದು (ದೊಡ್ಡಗುಡ್ಡ) :** ಶ್ರಾವಣ ಶುದ್ಧ ಸಪ್ತಮಿ ದಿನ ವರ್ಷಕ್ಕೊಮ್ಮೆ ಈ ಗ್ರಾಮದಿಂದ ಸುಮಾರು ಹತ್ತು ಕಿಲೋಮೀಟರು ದೂರದಲ್ಲಿರುವ ತಿಮ್ಮಪ್ಪನ ಗುಡ್ಡದ ಜಾತ್ರೆಗೂ ಮಾರುತಿ ಉತ್ಸವ ಮೂರ್ತಿಯನ್ನು ಪಾಲಕಿಯಲ್ಲಿ ಕರೆದೊಯ್ಯುತ್ತಾರೆ. ಆ ಗುಡ್ಡದಲ್ಲಿ ಒಡ ಮೂಡಿದ ವೆಂಕಟೇಶ ದೇವರು ಇದ್ದಾನೆ. ಆ ಜಾತ್ರೆಗೆ ಸುತ್ತಮುತ್ತಲಿನ ಅನೇಕ ಊರುಗಳಲ್ಲಿಯ ದೇವತೆಗಳ ಪಾಲಕಿಗಳು ಕೂಡಾ ಬರುತ್ತವೆ. ಒಂದು ವಿಶೇಷವೇನೆಂದರೆ ಈ ಕಡಲಬಾಳಪ್ಪನ ಪಾಲಕಿ ಬರುವವರೆಗೂ ಮಿಕ್ಕೆಲ್ಲ ಗ್ರಾಮಗಳ ದೇವತೆಗಳ ಪಾಲಕಿಗಳು ಗುಡ್ಡದ ಕೆಳಗೆ ಕಾದು ನಿಂತಿರುತ್ತವೆ. ಈ ಕಡಲಬಾಳಪ್ಪನ ಪಾಲಕಿ ಹೋದ ಮೇಲೆಯೇ ಆತನ ಪಾಲಕಿಯನ್ನು ಮುಂದಿಟ್ಟುಕೊಂಡೇ ಉಳಿದೆಲ್ಲ ಪಾಲಕಿಗಳು ಗುಡ್ಡದ ಮೇಲಿನ ವೆಂಕಟೇಶ ದೇವರಗುಡಿಗೆ ಹೋಗುತ್ತವೆ. ಯಾವಾಗಲೂ ಈ ಕಡಲಬಾಳಪ್ಪನ ಪಾಲಕಿ ಅಲ್ಲಿಗೆ ಸ್ವಲ್ಪ ತಡವಾಗಿಯೇ ಹೋಗುತ್ತದೆ. ಯಾಕೆಂದರೆ ಈ ಕಡಲಬಾಳಪ್ಪನು ಬರುವನೆಂಬ ನಿರೀಕ್ಷೆಯಲ್ಲಿ ಹಾದಿಯಲ್ಲಿ ಬರುವ ಎಲ್ಲಾ ಹಳ್ಳಿಗಳ ಜನರು ಈತನ ದರ್ಶನಕ್ಕಾಗಿ ಹಾಗೂ ಸ್ವಾಗತಕ್ಕಾಗಿ ತಮ್ಮ ಕಾಣಿಕೆಗಳೊಡನೆ ಕಾದು ನಿಂತಿರುತ್ತಾರೆ. ಈ ಹಳ್ಳಿಗಳ ಜನರ ಕಾಣಿಕೆಗಳನ್ನು ಸ್ವೀಕರಿಸಿ ಪೂಜಾರಿ ಕಡಲಬಾಳಪ್ಪನಿಗೆ ಮಂಗಳಾರತಿ ಮಾಡಿ ಅವರಿಗೆಲ್ಲಾ ಪ್ರಸಾದ ಕೊಟ್ಟು ತನ್ನ ಪ್ರಯಾಣ ಮುಂದುವರಿಸುತ್ತಾನೆ. ಇದಲ್ಲದೆ ಇನ್ನು ಒಂದು ವಿಶೇಷವೇನೆಂದರೆ ಈ ವೆಂಕಟೇಶ ದೇವಸ್ಥಾನ ತೀರಾ ಚಿಕ್ಕದಿದ್ದು, ಆ ಗುಡಿಯ ಸುತ್ತಲೂ ಗುಡ್ಡದ ಮೇಲೆ ಜಾಗ ಕೂಡ ಸ್ವಲ್ಪ ಇದೆ. ಆ ಗುಡಿಯಲ್ಲಿ ಕಡಲಬಾಳಪ್ಪನ ಪಾಲಕಿಗೊಂದೇ ಪ್ರವೇಶವಿದೆ. ಇನ್ನು ಎರಡು ಮೂರು ಪಾಲಕಿಗಳು ಮಾತ್ರ ಗುಡ್ಡದ ಮೇಲೆ ಹೋಗಿ ಹೊರಗಿನ ಖಾಲಿ ಜಾಗದಲ್ಲಿ ಇಳಿಯುತ್ತವೆ. ಮಿಕ್ಕ ಪಾಲಕಿಗಳು ಗುಡ್ಡದ ಕೆಳಗೆ ಇರುತ್ತವೆ. ಅವುಗಳಲ್ಲಿಯ ಉತ್ಸವ ಮೂರ್ತಿಗಳನ್ನು ಮಾತ್ರ ಮೇಲೆ ಕರೆದೊಯ್ಯುತ್ತಾರೆ. ಹೀಗಾಗಿ ಸುತ್ತಮುತ್ತಲಿನ ಅನೇಕ ಗ್ರಾಮದೇವತೆಗಳಿಗೆಲ್ಲ ಈ ಕಡಲಬಾಳಪ್ಪನೇ ನಾಯಕನ ಸ್ಥಾನದಲ್ಲಿದ್ದಾನೆ.

**ಹೊಳೆಸ್ನಾನಕ್ಕೆ ಹೋಗುವುದು :** ಶ್ರಾವಣಮಾಸದ ಕೊನೆಯ ಸೋಮವಾರದ ಹಿಂದಿನ ಶನಿವಾರದಂದು ಆಂಜನೇಯನ ಉತ್ಸವ ಮೂರ್ತಿಯನ್ನು ಪಾಲಕಿಯಲ್ಲಿ ಹಂಪಸಾಗರದ ಹೊಳೆಸ್ನಾನಕ್ಕೆ ಕರೆದುಕೊಂಡು ಹೋಗುತ್ತಾರೆ. ಪಾಲಕಿಯ ಜೊತೆಯಲ್ಲಿ ಊರಿನ ಅನೇಕ ಭಕ್ತರು ಇಲ್ಲಿಂದ ಕಾಲ್ನಡಿಗೆಯಲ್ಲಿಯೇ ಹೋಗುತ್ತಾರೆ. ಹೋಗುವ ಮಾರ್ಗ ಮಧ್ಯದಲ್ಲಿ ಕೋಡಿಹಳ್ಳಿ ಜನರು ಆಂಜನೇಯನಿಗೆ ಅಕ್ಕಿಪಡಿ ನೀಡುತ್ತಾರೆ. ನಂತರ ಆಂಜನೇಯನ ಪಾಲಕಿಯು ಮೇಲಿನ ಹಂಪಸಾಗರಕ್ಕೆ

ಹೋಗಿ ಅಲ್ಲಿ ಗಂಗಾಮಾತೆ (ತುಂಗಾಭದ್ರನದಿ)ಯ ಪೂಜೆಮಾಡಿ, ಆಂಜನೇಯನಿಗೆ ಸ್ನಾನ ಮಾಡಿಸುತ್ತಾರೆ ಮತ್ತು ಭಕ್ತರು ಸಹ ನದಿಯಲ್ಲಿ ಸ್ನಾನ ಮಾಡುತ್ತಾರೆ. ನಂತರ ಅಲ್ಲಿರುವ ಗಂಗಮ್ಮನ ಗುಡಿಗೆ ಬಂದು ಮಂಗಳಾರತಿ ಮಾಡಿಸಿಕೊಂಡು ತಾತನ ಮಠಕ್ಕೆ ಹೋಗುತ್ತಾರೆ. ಊರಿನ ವೈದಿಕ ಮನೆತನದವರು ಬಂದು ಆಂಜನೇಯ ಪೂಜೆ ಮಾಡುತ್ತಾರೆ. ಆ ಊರಿನ ಭಕ್ತರು ಸಹ ಬಂದು ಕಾಣಿಕೆ ಸಲ್ಲಿಸುತ್ತಾರೆ.

ಅಲ್ಲಿಂದ ಆಂಜನೇಯನ ಪಾಲಕಿಯು ಕೆಳಗಿನ ಹಂಪಸಾಗರದ ಆಂಜನೇಯನ ಗುಡಿಗೆ ಬರುತ್ತದೆ. ಅಲ್ಲಿಯ ಆಂಜನೇಯನಿಗೆ ಕುಂಕುಮ ಪೂಜೆ ಮಾಡಿರುತ್ತಾರೆ. ಅಲ್ಲಿ ಬಾಂಕರ ಮನೆತನದವರು ಬಂದಿರುವ ಭಕ್ತರಿಗೆ 'ಪರುವು' (ಅನ್ನದಾಸೋಹ) ಮಾಡಿಸಿರುತ್ತಾರೆ. ಅವರು ವಾದ್ಯಗಳ ಸಮೇತ ಆಂಜನೇಯನಿಗೆ ನೈವೇದ್ಯ ತರುತ್ತಾರೆ. ಮೊದಲಿಗೆ 'ದಾಸೋಗ' ನೀಡಿಸಿದ ನಂತರ ಹೋದ ಭಕ್ತರೆಲ್ಲರೂ ಅಲ್ಲಿಯೇ ಊಟ ಮಾಡುತ್ತಾರೆ. ಬೆಳಿಗ್ಗೆ ಮೂರು ಗಂಟೆಗೆ ಅಲ್ಲಿಂದ ಹೊರಟು ಬರುವಾಗ ಊರಲ್ಲಿ ಎಲ್ಲರೂ ಆಂಜನೇಯನಿಗೆ ಅಕ್ಕಿಪಡಿ ನೀಡುತ್ತಾರೆ. ಆಂಜನೇಯನ ಪಾಲಕಿಯು ಕಡಲಬಾಳಿಗೆ ಬರುವ ಹೊತ್ತಿಗೆ ಆರು ಗಂಟೆಯಾಗಿರುತ್ತದೆ. ಪಾಲಕಿಯು ಊರಿನೊಳಗೆ ಪ್ರವೇಶಿಸುವಾಗ ಮಾರುತಿಯನ್ನು ವಾದ್ಯಗಳ ಸಮೇತ ಸ್ವಾಗತ ಕೋರಿ ಊರಿನವರು ಹೂವು, ಹಣ್ಣು, ಕಾಯಿ ಮುಂತಾದ ಕಾಣಿಕೆಗಳನ್ನು ಅರ್ಪಿಸುತ್ತಾರೆ. ಆಮೇಲೆ ಆಂಜನೇಯನ ಪಾಲಕಿಯು ದೇವಸ್ಥಾನವನ್ನು ಪ್ರವೇಶಿಸುತ್ತದೆ.

**ರಾಮದೇವರ ಗುಡ್ಡಕ್ಕೆ ಹೋಗುವುದು (ಸಣ್ಣಗುಡ್ಡ) :** ಶ್ರಾವಣಮಾಸದ ಕೊನೆಯ ಸೋಮವಾರದ ದಿನ ಕಡಲಬಾಳು ಗ್ರಾಮಕ್ಕೆ ಒಂದು ಕಿ.ಮೀ. ದೂರದಲ್ಲಿರುವ ಇನ್ನೊಂದು ಸಣ್ಣ ಗುಡ್ಡದಲ್ಲಿ ಒಂದು ಸಣ್ಣ ಜಾತ್ರೆ ನಡೆಯುತ್ತದೆ. ಈ ಗುಡ್ಡದಲ್ಲಿ ರಾಮದೇವರು ಒಡಮೂಡಿದ್ದಾನೆ. ರಾಮ, ಲಕ್ಷ್ಮಣ, ಸೀತೆ ಹಾಗೂ ಆಂಜನೇಯನ ಸುಂದರ ಮೂರ್ತಿಗಳು ಒಡಮೂಡಿವೆ. ಅಲ್ಲಿಗೂ ಕಡಲಬಾಳಪ್ಪ ಆ ದಿನ ಹೋಗುತ್ತಾನೆ. ಆ ದಿನ ದೇವಸ್ಥಾನದಲ್ಲಿ ಸ್ವಾಮಿಗೆ ಆಭರಣ ಪೂಜೆ ಮಾಡಿರುತ್ತಾರೆ.

ಅಂದು ಆಂಜನೇಯನ ಉತ್ಸವ ಮೂರ್ತಿಯನ್ನು ಪಾಲಕಿಯಲ್ಲಿ ವಾದ್ಯಗಳ ಸಮೇತ ಕರೆದೊಯ್ಯುತ್ತಾರೆ. ಪಾಲಕಿಯ ಜೊತೆಗೆ ಪೂಜಾರಿ, ದಾಸಯ್ಯ, ಪವಾಡ ಮಾಡುವ ಬಾಳಪ್ಪ ಮತ್ತು ಆಂಜನೇಯನ ಭಕ್ತರು ಇರುತ್ತಾರೆ. ಆಂಜನೇಯನ ಪಾಲಕಿಯು ಮೊದಲು ಕರೆಕಟ್ಟೆ ಹನುಮಪ್ಪನ ದರ್ಶನ ತೆಗೆದುಕೊಂಡು ಆತನಿಗೆ ಮಂಗಳಾರತಿ ಮಾಡಿಸಿಕೊಂಡು ಬರುವಾಗ ಹಿರೇಸೊಬಟಿ ಹನುಮಪ್ಪನ ಪಾಲಕಿ ಜೊತೆಗೂಡಿ ರಾಮದೇವರ ಗುಡ್ಡಕ್ಕೆ ಬರುತ್ತಾನೆ. ರಾಮದೇವರು ಇರುವ ಸ್ಥಳಕ್ಕೆ ಬಂದು ಪಾಲಕಿಯನ್ನು ಕೆಳಗಿಳಿಸಿ ರಾಮದೇವರಿಗೆ ಮಂಗಳಾರತಿ ಮಾಡಿಸಿ ಆತನಿಗೆ ಕಾಯಿ, ಕರ್ಪೂರ ಅರ್ಪಿಸಿಕೊಂಡು ಊರಿಗೆ ಮರಳಿ ಹೋಗುತ್ತಾನೆ. ಈ ಗುಡ್ಡಕ್ಕೆ ಕಡಲಬಾಳು ಗ್ರಾಮದ ಅನೇಕ ಜನರು ಬಂದಿರುತ್ತಾರೆ.

ಶ್ರೀ ಕೃಷ್ಣಜನ್ಮಾಷ್ಟಮಿ : ಶ್ರೀ ಕೃಷ್ಣ ಜನಿಸಿದ ದಿನ ಇದಾಗಿದೆ. ಅಂದು ಆಂಜನೇಯನ ದೇವಸ್ಥಾನದ ಮುಂದೆ ಒಂದು ಕಂಬವನ್ನು ನೆಲದಲ್ಲಿ ಮಣ್ಣು ತೆಗೆದು ನಿಲ್ಲಿಸಿ ಅದರ ಮೇಲ್ಭಾಗದಲ್ಲಿ ದೇವಸ್ಥಾನದ ಕೆಂಪು ಬಣ್ಣದ ಛತ್ರಿಯನ್ನು ಕಟ್ಟಿರುತ್ತಾರೆ. ಛತ್ರಿಯ ಕೆಳಗೆ ಕೊಬರಿಬಟ್ಟಲು, ಕಾಯಿ, ಹರಿಷಣಕೊಂಬು, ಕೇರಳ್ಳು, ತಾಳೆಗರಿ ಕಟ್ಟಿರುತ್ತಾರೆ. ನಂತರ ಆಂಜನೇಯನನ್ನು ಪಾಲಕಿ ಉತ್ಸವದಲ್ಲಿ ಹೊರಡಿಸಿಕೊಂಡು ಬಂದು ಆ ಕಂಬಕ್ಕೆ ಪೂಜೆ ಮಾಡುತ್ತಾರೆ. ಆಗ ಪವಾಡ ಮಾಡುವ ಬಾಳಪ್ಪ ಆ ಕಂಬವನ್ನು ಹತ್ತುವಾಗ ಆತನಿಗೆ ಕುಡಿಯಲು ಹಾಲನ್ನು ಕೊಡುತ್ತಾರೆ. ಆತ ಸ್ವಲ್ಪ ಹಾಲು ಕುಡಿದು ಉಗುಳಿ ಬಿಡುತ್ತಾನೆ. ಈ ದೃಶ್ಯವು ಕೃಷ್ಣನು ಹಾಲು ಕುಡಿಯುವ ಘಟನೆಯನ್ನು ನೆನಪಿಗೆ ತರುತ್ತದೆ. ನಂತರ ಮೇಲೆ ಕಟ್ಟಿದ ಕಾಯಿಯನ್ನು ಹರಿಯುತ್ತಾನೆ. ಆಮೇಲೆ ಆಂಜನೇಯನ ಪಾಲಕಿ ಉತ್ಸವ ಗಂಗೆಗೆ ಹೋಗಿ ಬಂದು ದೇವಸ್ಥಾನವನ್ನು ಪ್ರವೇಶಿಸುತ್ತದೆ.

### ೬. ದಸರಾ

ಪಾಂಡವರ ಕಾಲದಿಂದಲೂ ಆಚರಣೆಯಲ್ಲಿ ಬಂದಿರುವ ಒಂದು ಹಿರಿಯರ ಹಬ್ಬವಾಗಿದೆ. ಮಹಾಭಾರತದ ಗೋಗ್ರಹಣ ಸಮಯದಲ್ಲಿ ಪಾಂಡವರ ವನವಾಸವು ಮುಕ್ತಾಯದ ಹಂತದಲ್ಲಿತ್ತು. ಆಗ ಅರ್ಜುನನು ತಾವು ಆಯುಧಗಳನ್ನು ಬಚ್ಚಿಟ್ಟಿದ್ದ ಶಮೀವೃಕ್ಷವನ್ನು (ಬನ್ನಿಮರ) ಪೂಜೆ ಮಾಡಿ ಆಯುಧಗಳನ್ನು ತೆಗೆದುಕೊಂಡು ಉತ್ತರಕುಮಾರನೊಡನೆ ಯುದ್ಧ ಭೂಮಿಗೆ ತೆರಳಿ, ಕೌರವರನ್ನು ಸೋಲಿಸಿ ವಿರಾಟರಾಯನ ಗೋವುಗಳನ್ನು ಸೆರೆಯಿಂದ ಬಿಡಿಸಿಕೊಂಡು ಬಂದನು. ಈ ವಿಜಯೋತ್ಸವವನ್ನೇ 'ವಿಜಯದಶಮಿ' ಎಂದು ಆಚರಿಸಲಾಗುತ್ತದೆ.

ವಿಜಯದಶಮಿಯ ದಿನದಂದು ಆಂಜನೇಯನಿಗೆ ಆಭರಣ ಪೂಜೆ ಮಾಡುತ್ತಾರೆ. ದಸರಾ ಹಬ್ಬದಲ್ಲಿ ಆಂಜನೇಯನ ದೇವಸ್ಥಾನದಲ್ಲಿ ಒಂಬತ್ತು ದಿನಗಳ ನವರಾತ್ರಿಯ ವಿಶೇಷ ಪೂಜೆ ಮಾಡುತ್ತಾರೆ. ಆ ದಿನಗಳಲ್ಲಿ ಬರುವ ಭಕ್ತರ ಸಂಖ್ಯೆಯೂ ಸಹ ಅಧಿಕವಾಗಿರುತ್ತದೆ. ಪ್ರತಿ ದಿನ ರಾತ್ರಿ ತಪ್ಪದಂತೆ ಆಂಜನೇಯನಿಗೆ ಮಂಗಳಾರತಿ ಮಾಡುತ್ತಾರೆ.

ಹತ್ತನೆ ದಿನ ದಶಮಿಯಂದು ಊರ ಹತ್ತಿರದ ಬನ್ನಿಮಹಾಕಾಳಿಗೆ ಬನ್ನಿ ಮುಡಿಯಲು ಆಂಜನೇಯನ ಉತ್ಸವ ಮೂರ್ತಿಯನ್ನು ಪಾಲಕಿಯಲ್ಲಿ ವಾದ್ಯಗಳ ಸಮೇತ ಕರೆದೊಯ್ಯುತ್ತಾರೆ. ದಶಮಿ ಎಂಬ ಉತ್ಸವ ಮಂಟಪವನ್ನು ಸಹ ಆ ದಿನ ಕೊಂಡೊಯ್ಯುತ್ತಾರೆ. ಪಾಲಕಿಯ ಜೊತೆ ಊರಿನ ಅನೇಕ ಭಕ್ತರು ಹೋಗುತ್ತಾರೆ ಬನ್ನಿಮಹಾಕಾಳಿಗೆ ಸೀರೆ, ಉಡಿತುಂಬುವ ಸಾಮಾನುಗಳನ್ನು ಮತ್ತು ಆಂಜನೇಯನ ಆಯುಧಗಳನ್ನು ತೆಗೆದುಕೊಂಡು ಹೋಗಿರುತ್ತಾರೆ. ಅಲ್ಲಿ ಬನ್ನಿಮಹಾಕಾಳಿಯ ಪೂಜೆಯ ಜೊತೆಗೆ ಆಯುಧಗಳನ್ನು ಸಹ ಪೂಜೆ ಮಾಡುತ್ತಾರೆ. ಅಲ್ಲಿಂದ ಊರಿಗೆ ಮರಳಿ ಬಂದನಂತರ ಊರಲ್ಲಿ ಜನರು ಒಬ್ಬರಿಗೊಬ್ಬರು ಪರಸ್ಪರ ಬನ್ನಿಕೊಡುತ್ತಾರೆ.

೭. ದೀಪಾವಳಿ (ಕಾರ್ತಿಕೋತ್ಸವ)

ಪಾಡ್ಯದಿಂದ ಒಂದು ತಿಂಗಳು ಆಂಜನೇಯನ ದೇವಸ್ಥಾನದಲ್ಲಿ ಪ್ರತಿ ರಾತ್ರಿ ದೀಪೋತ್ಸವ ಕಾರ್ಯಕ್ರಮ ಇರುತ್ತದೆ. ಮೊದಲಿಗೆ ಊರಿನ ಗೌಡರ ಮನೆತನದವರು ಬಂದು ಆಂಜನೇಯನ ದೀಪಗಳನ್ನು ಹಚ್ಚುತ್ತಾರೆ. ನಂತರ ಒಂದೊಂದು ದಿನ ಒಬ್ಬೊಬ್ಬ ಭಕ್ತರು ಕಾರ್ತಿಕ (ದೀಪ) ಹಚ್ಚುತ್ತಾರೆ. ಬರುವ ಅಮವಾಸೆಯ ಐದನೇ ದಿನ ಆಂಜನೇಯನ ಕಾರ್ತಿಕೋತ್ಸವದ ವಿಶೇಷ ದಿನ ಇರುತ್ತದೆ. ಈ ದಿನ ಸಹ ಆಂಜನೇಯನಿಗೆ ಆಭರಣ ಪೂಜೆ ಮಾಡಿರುತ್ತಾರೆ.

ಪ್ರತಿವರ್ಷ ಡಿಸೆಂಬರ್ ತಿಂಗಳ ಕಾರ್ತಿಕಮಾಸದ ಅಮವಾಸೆಯ ಐದನೇ ದಿನ ಪಂಚಮಿಯಂದು ಆಂಜನೇಯನ ಕಾರ್ತಿಕೋತ್ಸವ ಜರುಗುತ್ತದೆ. ಈ ಕಾರ್ತಿಕೋತ್ಸವಕ್ಕೆ ಸ್ವಾಮಿಯ ಭಕ್ತರು ವಿವಿಧ ಹಳ್ಳಿಗಳಿಂದ ಆಗಮಿಸುತ್ತಾರೆ. ಸ್ವಾಮಿಯ ಸೇವೆಸಲ್ಲಿಸಲು ಬೇರೆ ಬೇರೆ ಹಳ್ಳಿಗಳಿಂದ ಡೊಳ್ಳಿನ ಕುಣಿತದವರು ಆಗಮಿಸಿ ಅಂದು ರಾತ್ರಿಯಿಂದ ಬೆಳಿಗ್ಗೆಯವರೆಗೆ ತಮ್ಮ ಸೇವೆಯನ್ನು ಸಲ್ಲಿಸುತ್ತಾರೆ. ಅವರಿಗೆ ಭಕ್ತರ ಸಹಾಯದಿಂದ ಊಟ ಮತ್ತು ವಸತಿಯ ವ್ಯವಸ್ಥೆಯನ್ನು ಊರಿನ ದೈವಸ್ಥರು ಮಾಡಿಸಿರುತ್ತಾರೆ. ಆಂಜನೇಯಸ್ವಾಮಿಗೆ ಕುಂಕುಮಪೂಜೆ, ಎಲೆಪೂಜೆ, ಕಾರ್ತಿಕ ಹಚ್ಚುವುದು ಇವುಗಳ ಸೇವೆಯನ್ನು ಭಕ್ತರು ಮಾಡಿಸಿರುತ್ತಾರೆ. ಬೆಳಿಗ್ಗೆ ಐದು ಗಂಟೆಗೆ ಆಂಜನೇಯನ ಉತ್ಸವ ಮೂರ್ತಿಯನ್ನು ಪಾಲಕಿಯಲ್ಲಿ ವಾದ್ಯಗಳ ಸಮೇತ ಊರ ಮುಂದಿರುವ ಪಾದಗಟ್ಟಿ ಹನುಮಪ್ಪನ ಹತ್ತಿರ ಹೋಗಿ ಪೂಜೆ ಸಲ್ಲಿಸಿ ಮಂಗಳಾರತಿ ಮಾಡಿಕೊಂಡು ಬರುತ್ತಾರೆ. ಈ ಆಚರಣೆ ಪ್ರತಿವರ್ಷ ತಪ್ಪದಂತೆ ನಡೆದುಕೊಂಡು ಬಂದಿದೆ.

## ೪.೩. ಆಂಜನೇಯ ಸ್ವಾಮಿಯ ಉಡುಗೆ-ತೊಡುಗೆಗಳು

ಭಕ್ತರು ಆಂಜನೇಯನಿಗೆ ಅನೇಕ ಹರಕೆಗಳನ್ನು ಒಪ್ಪಿಸುತ್ತಾರೆ. ವೈಯಕ್ತಿಕವಾಗಿ ಕಷ್ಟ ಬಂದವರು ಅಂಥ ಕಷ್ಟ ತೀರುವುದಕ್ಕಾಗಿ ದೈವಕ್ಕೆ ಹರಕೆ ಒಪ್ಪಿಸುತ್ತಾರೆ. ಹರಕೆಗಳನ್ನು ವಸ್ತುಗಳ ರೂಪದಲ್ಲಿಯೂ ಒಪ್ಪಿಸುತ್ತಾರೆ. ಜನರು ನಾನಾ ರೀತಿಯ ಹರಕೆ ಕಟ್ಟಿಕೊಂಡು ನಿಯತ್ತಿನಿಂದ ಹರಕೆ ತೀರಿಸುತ್ತಾರೆ. ಹರಕೆ ತೀರಿಸದಿದ್ದರೆ ಏನೆಲ್ಲ ಕಷ್ಟ ಪ್ರಾಪ್ತವಾಗುತ್ತದೆ ಎಂಬ ಭಯ ಜನರನ್ನು ಆವರಿಸಿದೆ. ಈ ರೀತಿ ಆಂಜನೇಯನಿಗೆ ಹರಕೆ ಹೊತ್ತವರು ವಸ್ತುಗಳ ರೂಪದಲ್ಲಿ ಆತನಿಗೆ ಬೆಳ್ಳಿ, ಬಂಗಾರದ ಸಾಮಾನುಗಳನ್ನು ಒಪ್ಪಿಸಿದ್ದಾರೆ. ಆ ಸಾಮಾನುಗಳನ್ನು ವಿಶೇಷ ಸಂದರ್ಭದಲ್ಲಿ ಮಾತ್ರ ಹಾಕಿ ಪೂಜಿಸುತ್ತಾರೆ. ಕಡಲಬಾಳು ಆಂಜನೇಯನಿಗೆ 'ಅನೇಕ ಭಕ್ತರು ಬೆಳ್ಳಿ ಮತ್ತು ಬಂಗಾರದ ಸಾಮಾನುಗಳನ್ನು ಹರಕೆಯ ರೂಪದಲ್ಲಿ ಅರ್ಪಿಸಿದ್ದಾರೆ.

೧೯೪೧ ರಿಂದ ೧೯೪೪ ರವರೆಗೆ ಆಂಜನೇಯಸ್ವಾಮಿಯ ಧರ್ಮಕರ್ತರಾಗಿ ಸೇವೆಸಲ್ಲಿಸಿದ ಊರಿನ ಗೌಡರಾದ ಶ್ರೀಯುತ ಪಾಟೇಲ್ ಗುರುಬಸವನಗೌಡರು ೧೭.೪.೧೯೪೪ ಶನಿವಾರದಂದು ಧರ್ಮಕರ್ತ ಕೆಲಸವನ್ನು ಬ್ಯಾಟಿ ಸಕ್ರಪ್ಪನ ಮಗ ಹನುಮಪ್ಪ, ಪೂಜಾರು ಕುಳ್ಳಪ್ಪನ ಮಗ ಹನುಮಂತಪ್ಪ, ಬಂಡಿ

ಕಡ್ಲೆಪ್ಪನ ಮಗ ಬಸಪ್ಪ ಮತ್ತು ಚಪ್ರ ಭೀಮಪ್ಪನ ಮಗ ಸಕ್ರಪ್ಪ ಇವರುಗಳಿಗೆ ವಹಿಸಿ ಆಂಜನೇಯಸ್ವಾಮಿಯ ದೇವರು ಸಾಮಾನುಗಳನ್ನು ಇವರ ಸ್ವಾಧೀನಕ್ಕೆ ಒಪ್ಪಿಸಿರುತ್ತಾರೆ. ಗೌಡರ ನಂತರ ಪೂಜಾರು ಗಡುಪಪ್ಪ (ಹನುಮಂತಪ್ಪ) ಧರ್ಮಕರ್ತನ ಸೇವೆಯನ್ನು ಮುಂದುವರಿಸುತ್ತಾನೆ. ೧೭.೪.೧೯೪೮ ರಂದು ಪಾಟೇಲ್ ಗುರುಬಸವನಗೌಡರು ಮೇಲೆ ತಿಳಿಸಿದವರ ಸ್ವಾಧೀನಕ್ಕೆ ಕೊಟ್ಟ ಕಡಲಬಾಳು ಆಂಜನೇಯಸ್ವಾಮಿಯ ದೇವರ ಸಾಮಾನುಗಳ ಪಟ್ಟಿ ಕೆಳಗಿನಂತಿವೆ.

**ಬೆಳ್ಳಿ ಸಾಮಾನುಗಳು :** ೧ ಕಿರುಟ (೬ ತುಂಡುಗಳು), ೧ ಕಾಯಿ, ೧೨ ಹಸ್ತಗಳು, ೭ನಾಮಗಳು, ೪ ಕೋರೆಮೀಸೆ, ೧ ಬೆಳ್ಳಿ ಪ್ರಭಾವಳಿ (ಸಣ್ಣದು), ೪ ಬೆಳ್ಳಿ ಛತ್ರಿಗಳು, ೨ ಕಾಲುರುಳಿತಗಡು,೨ ಕಾಲು ಕಡಗ, ೩ ರಟ್ಟಿಕಡಗ, ೨ ಉಂಗುಷ್ಟ, ೧ ಉಡುದಾರ (ಎರಡುಯಳಿದು), ೭ ಕೊರಳ ತುಂಡು ಸಾಮಾನು, ೧ ಕಿವಿತಗಡು, ೧ ರಟ್ಟಿಬಳಿ, ೧ ಚಡ್ಡಿ ತಗಡು, ೧ ಲಂಗೋಟತಗಡು, ೨ ಕಲಶಗಳು (೩ ತುಂಡುಗಳು), ೧ ಹರಿನಾಮ (ದೊಡ್ಡದು), ೩ ನಾಮಗಳು (೩ ನಾಮದವು), ೧ ಗೆಜ್ಜಿ ಉಡುದಾರ (೨ ಗಂಟೆಸಹಿತ), ೨ ಕೈಸರಪಳಿ, ೪ ಬೆಳ್ಳಿಕಣ್ಣುಗಳು, ೪೨ ಹೂವುಗಳು, ೧ ಚಾಮರ, ೧ ಸರಪಳಿ, ೧ ಇಂದ್ರಜಿತ್‌ಹಣೆಪಟ್ಟಿ, ೩ ಲಿಂಗದಹೂವು (ಚೌಕ), ೧ ಬಾಲದ ತುಟ್ಟುತುದಿ. ಒಟ್ಟು ಒಂದುನೂರ ಹದಿನಾಲ್ಕು ಸಾಮಾನುಗಳಿದ್ದವು.

**ಬಂಗಾರ ಸಾಮಾನುಗಳು :** ೧೭ ಗುಂಡಿನ ಬಂಗಾರದ ಸರ, ೨ ಬಂಗಾರದ ಕಣ್ಣುಗಳು, ೧.ಬೆಳ್ಳಿ ಕಣ್ಣು (ಮಧ್ಯದಲ್ಲಿ ಬಂಗಾರದ ಚುಕ್ಕಿ ಇದೆ) ಒಟ್ಟು ೨೦ ಸಾಮಾನುಗಳು (ಬೆಳ್ಳಿ ಸಹಿತ ತೂಕ ಅಂದಾಜು ನಾಲ್ಕು ಅಣೆ)

**ಹಿತ್ತಾಳೆ ಮತ್ತು ತಾಮ್ರದ ಸಾಮಾನುಗಳು :** ೧ ತಾಮ್ರದ ಕೊಡಪಾನ, ೧ ಹಿತ್ತಾಳಿ ತಂಬಿಗೆ, ೧ ಹಿತ್ತಾಳಿ ತಾಟು. ಒಟ್ಟು ಮೂರು ಸಾಮಾನುಗಳು.

ಒಟ್ಟು ೧೧೪ ಸಾಮಾನುಗಳು ಬೆಳ್ಳಿಯವು. ಅಂದಾಜು ತೂಕ ೨೩೦ ತೊಲಿ.

ಈ ಮೇಲೆ ಕಾಣಿಸಿದ ಬೆಳ್ಳಿ ಮತ್ತು ಬಂಗಾರದ ಆಭರಣಗಳನ್ನು ಭಕ್ತರು ಕೊಡಿಸಿರುತ್ತಾರೆ. ಅವುಗಳಲ್ಲಿ ಕೆಲವು ಸಾಮಾನುಗಳು ಈಗ ಇಲ್ಲ. ಹರಕೆಗಳನ್ನು ಹೊತ್ತ ಭಕ್ತರು ಈಗಲೂ ಸ್ವಾಮಿಗೆ ಸಾಮಾನುಗಳನ್ನು ಕೊಡಿಸುತ್ತಿದ್ದಾರೆ. ಸ್ವಾಮಿಗೆ ಆಭರಣ ಪೂಜೆ ಸಮಯದಲ್ಲಿ ಮಾತ್ರ ಬೆಳ್ಳಿ ಮತ್ತು ಬಂಗಾರದ ಸಾಮಾನುಗಳನ್ನು ಮೈಮೇಲೆ ಹಾಕುತ್ತಾರೆ. ಆಂಜನೇಯ ಸ್ವಾಮಿಯ ಉಡುಗೆ ತೊಡಿಗೆಗಳನ್ನು ಆತನ ಪೂಜೆ ಮಾಡುವ ಪೂಜಾರರು ಹಾಕುತ್ತಾರೆ. ಕೆಲವು ಪ್ರಮುಖ ಹಬ್ಬಗಳಲ್ಲಿ ಮಾತ್ರ ಬೆಳ್ಳಿ, ಬಂಗಾರದ ಸಾಮಾನುಗಳನ್ನು ಮೈಮೇಲೆ ಹಾಕುತ್ತಾರೆ.

ಆಭರಣ ಪೂಜೆಯ ಸಂದರ್ಭದಲ್ಲಿ ಆಂಜನೇಯ ಸ್ವಾಮಿಗೆ ಈಗ ಹಾಕುವ ಬೆಳ್ಳಿಯ ಸಾಮಾನುಗಳು. ಎದೆ ಕವಚ, ಚೆಡ್ಡಿ, ಪಾದ, ಹಸ್ತ, ತೋಳುಕಟ್ಟು, ಕಿರೀಟ, ಮುಖ, ಕಿವಿ, ಬಾಲಕ್ಕೆಹೂವು, ಉಡುದಾರ, ಬಂಗಾರದ ಕಣ್ಣು ಮುಂತಾದ ಆಭರಣಗಳನ್ನು ಹಾಕುತ್ತಾರೆ.

ಕಡಲಬಾಳು ಆಂಜನೇಯಸ್ವಾಮಿಯ ಸಾಮಾನುಗಳ ಪಟ್ಟಿಯ ಲಿಖಿತ ಮಾಹಿತಿಯನ್ನು ನೀಡಿದವರು ಊರಿನಗೌಡರಾದ ಶ್ರೀಯುತ ಪಾಟೇಲ್ ಗುರುಬಸವನಗೌಡರು.

## ೪.೪. ಜಾತ್ರೆಯಲ್ಲಿನ ಪ್ರದರ್ಶಕ ಕಲೆಗಳು

ಆಂಜನೇಯಸ್ವಾಮಿಯ ಸಂದರ್ಭದಲ್ಲಿ ಅನೇಕ ಪ್ರದರ್ಶಕ ಕಲೆಗಳು ಪ್ರದರ್ಶನಗೊಳ್ಳುತ್ತವೆ. ಅವುಗಳಲ್ಲಿ ಪ್ರಮುಖವಾದವುಗಳೆಂದರೆ ಬಯಲಾಟ, ನಾಟಕ, ಕೋಲಾಟ ಮತ್ತು ಕುಸ್ತಿ ಪಂದ್ಯಾವಳಿಗಳು.

**ಬಯಲಾಟ :** ಬಯಲಾಟ ಎಂದರೆ ಬಯಲಿನಲ್ಲಿ ಆಟವನ್ನು ಆಡುವುದರಿಂದ ಬಯಲಾಟ ಎಂಬ ಹೆಸರು ಬಂದಿದೆ. ಬಯಲಾಟ ಇಡೀ ರಾತ್ರಿ ನಡೆಯುವ ಒಂದು ಸಂಪ್ರದಾಯಗಳ ಕಲೆಯಾದುದರಿಂದ ನೋಡುಗರಿಗೆ ಬೇಸರ ಬಾರದಂತೆ ವಿವಿಧ ಬಗೆಯ ಕಲಾಪ್ರಕಾರಗಳು ಅದರಲ್ಲಿ ಮೇಳೈಸಿವೆ. ಒಂದರ ಕೊರತೆಯನ್ನು ಮತ್ತೊಂದು ತುಂಬಿ ಕೊಡುವುದರ ಮೂಲಕ ಕಲೆಯ ಪರಿಪೂರ್ಣತೆಗೆ ಕಾರಣವಾಗಿದೆ. ಬಯಲಾಟದಲ್ಲಿ ಕುಣಿತ, ಮಾತು ಇವು ಬಯಲಾಟದ ಮುಖ್ಯ ಅಂಗಗಳಾಗಿ ಕಥಾಭಾಗವನ್ನು ಕೊಂಡೊಯ್ಯುವಲ್ಲಿ ಪ್ರಮುಖ ಸಾಧನವಾಗಿವೆ. ಬಯಲಾಟದಲ್ಲಿ ಸಂಭಾಷಣೆ ಎಷ್ಟೇ ಸೊಗಸಾಗಿದ್ದರೂ ಅದು ಸಂಗೀತದ ಕೆಲಸವನ್ನು ಮಾಡಲಾಗದು. ಕೋಪ, ದುಃಖ, ಕರುಣೆ, ಆವೇಶ ಮೊದಲಾದ ಭಾವಾಭಿವ್ಯಕ್ತಿಯನ್ನು ಸಂಗೀತ ಸಮರ್ಪಕವಾಗಿ ಅಭಿವ್ಯಕ್ತಿಗೊಳಿಸಬಲ್ಲದು. ಬಯಲಾಟದಲ್ಲಿ ಸಂಭಾಷಣೆಯ ಜೊತೆ ಸಂಗೀತ ಸೇರಿಕೊಂಡು ಏಕತನದ ಬೇಸರವನ್ನು ನೀಗಿಸುತ್ತದೆ.[೧೧]

ಕಡಲಬಾಳು ಗ್ರಾಮದಲ್ಲಿ ಜಾತ್ರೆ ಸಂದರ್ಭದಲ್ಲಿ ಹಿಂದಿನ ಕಾಲದಿಂದಲೂ ಬಯಲಾಟಗಳನ್ನು ಆಡುತ್ತಾ ಬಂದಿದ್ದಾರೆ. ಒಂದು ಜನಾಂಗದವರು ರಥೋತ್ಸವದ ದಿನ ಬಯಲಾಟ ಆಡಿದರೆ ಮತ್ತೊಂದು ಜನಾಂಗದವರು ಬ್ಯಾಟಿಗಿಡದ ದಿನ ಬಯಲಾಟವನ್ನು ಆಡುತ್ತಾರೆ. ಬಯಲಾಟ ಆಡುವುದಕ್ಕೆ ಹಿಂದೆ ಸ್ಪರ್ಧೆ ನಡೆದು ಆಡಿದ ಪ್ರಸಂಗಗಳೂ ಇವೆ.

ನಾಯಕ ಜನಾಂಗದ ಶ್ರೀ ಮಾರುತಿ ನಾಟ್ಯ ಕಲಾಸಂಘದವರು ಪ್ರತಿವರ್ಷ ರಥೋತ್ಸವದ ದಿನ 'ಸಂಗ್ಯಾಬಾಳ್ಯ' ಸಾಮಾಜಿಕ ಬಯಲಾಟವನ್ನು ಆಡುತ್ತಾರೆ. ಅದು ಸುಮಾರು ನೂರು ಪ್ರಯೋಗಗಳನ್ನು ಕಂಡಿದೆ. ಈ ಬಯಲಾಟದ ಕಥಾಮಾಸ್ತರ ಬ್ಯಾಟಿ ಲಕ್ಷ್ಮಪ್ಪ ಮತ್ತು ದಪ್ಪು ಬಾರಿಸುವವರು ಹರಿಜನ ಮದಗಪ್ಪ ಮತ್ತು ಇದೇ ಸಂಘದವರು ಪೌರಾಣಿಕ ದೊಡ್ಡಾಟಗಳಾದ ಕಿರತಾರ್ಜುನಕಾಳಗ, ಭಕ್ತಮಾರ್ಕಂಡೇಯ ದೊಡ್ಡಾಟಗಳನ್ನು ಸಹ ಹಾಡಿದ್ದಾರೆ.

ಹರಿಜನಕೇರಿಯ ಶ್ರೀ ದುರ್ಗಾಂಭಿಕ ನಾಟ್ಯ ಸಂಘದವರು ಜಾತ್ರೆಯ ದಿನ 'ಮಾಸ್ತರ' ಅಥವಾ 'ಸಂಗ್ಯಾಬ್ಯಾಳ' ಸಾಮಾಜಿಕ ಬಯಲಾಟಗಳನ್ನು ಆಡುತ್ತಾರೆ. ಚಲವಾದಿ ಜನಾಂಗದವರು ಸಹ 'ಮಾಸ್ತರ' ಅಥವಾ 'ಬಸವಂತ-ಬಲವಂತ' ಸಾಮಾಜಿಕ ಬಯಲಾಟಗಳನ್ನು ಆಡುತ್ತಾರೆ. ಬಯಲಾಟವನ್ನು ಊರಿನ ಮಧ್ಯ ಭಾಗದಲ್ಲಿರುವ ಬಯಲು ರಂಗಮಂದಿರಲ್ಲಿ ಆಡುತ್ತಾರೆ. ಯಾವುದೇ ಜನಾಂಗದವರು ಆಡಿದರೂ ಸಹ ಊರಿನಲ್ಲಿ ಎಲ್ಲರೂ ಬಯಲಾಟ ನೋಡಲು ಹೋಗುತ್ತಾರೆ.

ಬಯಲಾಟದ ಹಲವಾರು ಕಲಾವಿದರು ಊರಲ್ಲಿ ಇದ್ದಾರೆ. ಅವರಲ್ಲಿ ಪ್ರಮುಖರಾದವರೆಂದರೆ ಪೂಜಾರು ವೆಂಕಟಸೋಮಪ್ಪ (ಹೆಣ್ಣು ಪಾತ್ರ), ಕೃಷ್ಣಾಪುರ ಬಸವರಾಜ (ಹೆಣ್ಣು ಪಾತ್ರ) ಮತ್ತು ಅರ್ಕಾಲು ಶಿವರಾಮಪ್ಪ.

**ನಾಟಕ** : ಕಲೆ, ಸಂಗೀತ, ನೃತ್ಯಗಳು ಮಾನವನ ಅಭಿವ್ಯಕ್ತಿ ರೂಪಗಳು. ನಾಗರೀಕತೆಯನ್ನು ಹೊಂದಿದಂತೆಲ್ಲಾ ಮಾನವನು ಹಲವಾರು ರೀತಿಯ ಮನೋರಂಜಕ ವ್ಯವಸ್ಥೆಯನ್ನು ಮಾಡಿಕೊಂಡಿದ್ದಾನೆ. ಹಬ್ಬ, ಆಚರಣೆ, ಸಂಪ್ರದಾಯ ಮತ್ತು ಜಾತ್ರೆ ಈ ಎಲ್ಲ ಮನೋರಂಜನೆಯಲ್ಲಿ ಹಲವಾರು ರೀತಿಯ ಕಲೆಯನ್ನು ಪ್ರದರ್ಶಿಸುತ್ತಾರೆ. ಅಂತಹ ಅಭಿವ್ಯಕ್ತಿಯಲ್ಲಿ ನಾಟಕವೂ ಒಂದಾಗಿದೆ.

ಕಡಲಬಾಳು ಗ್ರಾಮದಲ್ಲಿ ಪ್ರತಿವರ್ಷ ರಥೋತ್ಸವ ಸಂದರ್ಭದಲ್ಲಿ ನಾಟಕಗಳನ್ನು ಆಡುತ್ತಾರೆ. ಹಿಂದೆ ಅನೇಕ ನಾಟಕಗಳನ್ನು ಆಡಿದ್ದಾರೆ. ಆದರೆ ಈಗ ನಾಟಕ ನೋಡುವವರ ಸಂಖ್ಯೆ ಕಡಿಮೆಯಾದುದರಿಂದ ನಾಟಕ ಆಡುವುದು ಸಹ ಕಡಿಮೆಯಾಗಿದೆ. ಈಗ ವರ್ಷಕ್ಕೆ ಒಂದು ನಾಟಕವನ್ನಾದರೂ ಆಡುತ್ತಾರೆ. ಶ್ರೀ ಮಾರುತಿ ನಾಟ್ಯ ಕಲಾ ಸಂಘದವರು ಸಾಮಾಜಿಕ ನಾಟಕಗಳಾದ ಯಾರು ನನ್ನವರು, ತಾಯಿಗೆ ತಕ್ಕಮಗ ಮತ್ತು ದುರ್ದೈವ ಆಡಿದ್ದಾರೆ. ಪೌರಾಣಿಕ ನಾಟಕಗಳಾದ ಉತ್ತರ ಭೂಪ ಮತ್ತು ರಕ್ತರಾತ್ರಿ ನಾಟಕಗಳನ್ನು ಸಹ ಹಿಂದೆ ಆಡಿದ್ದಾರೆ.

ಹರಿಜನರ ಶ್ರೀ ದುರ್ಗಾಂಭಿಕ ನಾಟ್ಯ ಸಂಘದವರು ಸಹ ಕುರುಕ್ಷೇತ್ರ ಮತ್ತು ಕಳ್ಳಕಟ್ಟಿದ ತಾಳಿ ನಾಟಗಳನ್ನು ಆಡಿದ್ದಾರೆ. ಶ್ರೀ ಗವಿಸಿದ್ದೇಶ್ವರ ನಾಟ್ಯ ಕಲಾ ಸಂಘದವರು ಗೌಡ್ರಗದ್ದ ಮತ್ತು ಪುಡಾರಿ ನಂಜಪ್ಪ ಸಾಮಾಜಿಕ ನಾಟಕಗಳನ್ನು ಆಡಿದ್ದಾರೆ. ಗೌಡ್ರಗದ್ದ ನಾಟಕವು ಬಹಳ ಪ್ರದರ್ಶನಗಳನ್ನು ಕಂಡಿದೆ.

ನಾಟಕದ ಹಲವಾರು ಕಲಾವಿದರು ಊರಲ್ಲಿ ಇದ್ದಾರೆ. ಅವರಲ್ಲಿ ಪ್ರಮುಖರಾದವರೆಂದರೆ ಪೂಜಾರು ಲಕ್ಷ್ಮೀಕಾಂತಪ್ಪ, ಶೆಟ್ರು ಕೊಟ್ರಬಸಪ್ಪ, ಬ್ಯಾಟಿ ಬಸವರಾಜ, ಒಂಟಿಗೋಡಿ ಬಸವರಾಜ, ಹಡಪದ ವಿರುಪಾಕ್ಷಪ್ಪ, ಹಡಪದ ಗುರುಸಿದ್ದಪ್ಪ, ಎಸ್. ದಸ್ತಗಿರಿ ಸಾಹೇಬ್ ಮತ್ತು ಜಿ. ಪ್ರಭುದೇವ.

**ಕೋಲಾಟ** : ಲಯ, ಕುಣಿತಗಳು ಮುಖ್ಯವಾದ ಕಲೆಗಳಲ್ಲಿ ಕೋಲಾಟ ಒಂದು. ಇದು ಅತ್ಯಂತ ಜನಪ್ರಿಯವಾದ ಮನೋರಂಜಕ ಕಲೆಯಾಗಿದೆ. ಇದರಲ್ಲಿ ಲಯ, ಕುಣಿತದ ಗತ್ತುಗಳನ್ನು ನಿರ್ದೇಶಿಸುವುದು ಕಲಾವಿದರ ಕೈಯಲ್ಲಿದೆ. ಆದರೂ ಕಾಲಿಗೆ ಮತ್ತು ಕೋಲಿಗೆ ಕಟ್ಟಿದ ಗೆಜ್ಜೆನಿನಾದ ಮತ್ತು ಕುಣಿತದ ಬೆಡಗು, ಜಿಗಿತ, ಉತ್ಸಾಹಗಳು ಕೋಲಾಟದ ಕಲಾತ್ಮಕ ಸ್ವರೂಪಕ್ಕೆ ಹೆಚ್ಚಿನ ಮೆರಗು ತುಂಬುತ್ತವೆ. ಕೋಲಾಟದಲ್ಲಿ ಗಮನಾರ್ಹವಾದ ಮತ್ತೊಂದು ಅಂಶವೆಂದರೆ ಜನಪದ ದಾಟಿಯ ಹಾಡುಗಳನ್ನು ಹೇಳುವುದು. ಕೋಲಾಟದಲ್ಲಿ ಹಾಡು ಸಣ್ಣದಾಗಿ ಕ್ರಮಕ್ರಮವಾಗಿ ಕೋಲಿನ ತಾಡನ ಮತ್ತು ಕುಣಿತದ ರಭಸ ಹೆಚ್ಚಾಗುತ್ತಾ ಹೋಗುತ್ತದೆ. ಕರ್ನಾಟಕದ ಎಲ್ಲಾ ಪ್ರದೇಶಗಳಲ್ಲಿಯೂ ಪ್ರಚಲಿತವಿರುವ ಈ ಕಲೆಯು ಸುಗ್ಗಿಯ ಕಾಲದಲ್ಲಿ ಪ್ರದರ್ಶನಗೊಳ್ಳುತ್ತದೆ. ಜಾತ್ರೆಯ ಸಂದರ್ಭದಲ್ಲಿಯೂ ಕೋಲಾಟದ ಪ್ರದರ್ಶನವನ್ನು ನಾವು ಕಾಣಬಹುದು.

ಆಂಜನೇಯ ಜಾತ್ರೆಯ ದಿನ ಪ್ರತಿವರ್ಷ ಕೋಲಾಟ ಪ್ರದರ್ಶನಗೊಳ್ಳುತ್ತದೆ. ಊರಿನ ಹರಿಜನರ ಬಸಪ್ಪನು ಅನೇಕ ಕೋಲಾಟದ ಪದಗಳನ್ನು ಹೇಳುತ್ತಾನೆ. ತಮ್ಮ ಪಂಗಡದವರಿಗೆ ಮತ್ತು ನಾಯಕ ಜನಾಂಗದವರಿಗೆ ಕೋಲಾಟ ಆಡುವುದನ್ನು ಮತ್ತು ಕೋಲಾಟದ ಪದಗಳನ್ನು ಕಲಿಸಿದ್ದಾನೆ. ಎರಡು ಪಂಗಡದವರು ಜಾತ್ರೆಯ ದಿನ ಕೋಲಾಟದ ಪ್ರದರ್ಶನ ನೀಡುತ್ತಾರೆ. ಈ ಪ್ರದರ್ಶನವನ್ನು ಅನೇಕ ಜನರು ವೀಕ್ಷಿಸುತ್ತಾರೆ.

**ಕುಸ್ತಿ ಪಂದ್ಯಾವಳಿ :** ಆಂಜನೇಯನ ರಥೋತ್ಸವ ಮುಗಿದು ಮೂರನೇ ದಿನ ಊರಿನವರು ಕುಸ್ತಿ ಪಂದ್ಯಾವಳಿಯನ್ನು ಏರ್ಪಡಿಸಿರುತ್ತಾರೆ. ಊರಿನ ಬ್ಯಾಟೇರು ಓಣಿಯಲ್ಲಿ 'ಶ್ರೀ ಮಾರುತಿ ಗರಡಿ ಮನೆ' ಇದೆ. ಬಹಳ ಹಿಂದಿನ ಕಾಲದಿಂದಲೂ ಅಲ್ಲಿ ಗರಡಿ ಮನೆ ಇದೆ. ಇತ್ತೀಚಿನ ಕಟ್ಟಡವನ್ನು ಸರಕಾರದವರು ಕಟ್ಟಿಸಿದ್ದಾರೆ. ಅಲ್ಲಿ ಕುಸ್ತಿಯ ಅಭ್ಯಾಸ ಮಾಡುತ್ತಾರೆ. ಕುಸ್ತಿ ಆಡುವುದನ್ನು ಬ್ಯಾಟಿ ಕಡ್ಲೆಪ್ಪನು ಕಲಿಸುತ್ತಿದ್ದಾನೆ. ಅಲ್ಲಿ ನಾಯಕ ಜನಾಂಗದವರೇ ಹೆಚ್ಚಾಗಿ ಕುಸ್ತಿ ಆಡುವ ಅಭ್ಯಾಸ ಮಾಡುತ್ತಿದ್ದಾರೆ. ಕುಸ್ತಿ ಪಂದ್ಯಾವಳಿಗಾಗಿ ಬೇರೆ ಬೇರೆ ಹಳ್ಳಿಗಳಿಂದ ಕುಸ್ತಿ ಆಡುವವರು ಮತ್ತು ನೋಡವವರು ಬರುತ್ತಾರೆ. ನಾಯಕ ಜನಾಂಗದಲ್ಲಿ ಸದ್ಯ ಕುಸ್ತಿ ಆಡುವವರಲ್ಲಿ ಬ್ಯಾಟಿ ಕುಮಾರ, ಕುರುಬ ಜನಾಂಗದಲ್ಲಿ ಮಾಗಳ ಕರಿಬಸಪ್ಪ, ಮುಸ್ಲಿಂ ಜನಾಂಗದಲ್ಲಿ ಬಂಡೇರ ಖಾಜಾ ಸಾಹೇಬ್ ಪ್ರಮುಖರಾಗಿದ್ದಾರೆ. ಗೆದ್ದವರಿಗೆ ಬಹಮಾನ ಕೊಟ್ಟು ಊರಲ್ಲಿ ಮೆರವಣಿಗೆ ಮಾಡುತ್ತಾರೆ. ಈ ಪಂದ್ಯಾವಳಿ ವೀಕ್ಷಸಲು ಊರಿನ ಜನರು ಸಹ ಹೋಗುತ್ತಾರೆ.



## ಅಡಿಟಿಪ್ಪಣಿಗಳು

೧. ಡಾ. ಚಂದ್ರಶೇಖರ ಕಂಬಾರ (ಸಂ), ಕನ್ನಡ ಜಾನಪದ ವಿಶ್ವಕೋಶ, ಪುಟ. ೧೧೪-೧೧೫

೨. ಸಿದ್ದಲಿಂಗಯ್ಯ, 'ಜನಪದ ಆರಾಧನೆಗಳು ಮತ್ತು ಆಚರಣೆಗಳು' (ಸಂ) ಹೆಚ್.ಜೆ. ಲಕ್ಕಪ್ಪಗೌಡ. ಪುಟ. ೧೨೫-೧೨೮

೩. ಹಂಪಾ ನಾಗರಾಜಯ್ಯ, ಕರ್ನಾಟಕ ಜಾತ್ರೆಗಳು, ಪುಟ. ೯-೧೧

೪. ಮಂಜುನಾಥ ಬೇವಿನಕಟ್ಟಿ, ಮಲಿಯಮ್ಮ ನಿನ್ನಾಲ್ಕುದೋ...ಉದೋ... ಪುಟ. ೨೨

೫. ಎಸ್.ಎಸ್. ಹಿರೇಮಠ, ಜಾತ್ರೆಗಳು, ಪುಟ. ೪೮-೪೯

೬. ಕುಂ.ಬಾ. ಸದಾಶಿವಪ್ಪ, 'ಬಳ್ಳಾರಿ ಜಿಲ್ಲಾ ವಾಸ್ತುಶಿಲ್ಪದಲ್ಲಿ ಕಂಬ ಮತ್ತು ತೇರು-ಒಂದು ಅಧ್ಯಯನ' ಸೂರ್ಯಕಾಂತಿ ಸ್ಮರಣ ಸಂಚಿಕೆ, ಪುಟ. ೪೮

೭. ತೀ.ನಂ. ಶಂಕರನಾರಾಯಣ, ಕೊಂಡ ಹಾಯುವ ಸಂಪ್ರದಾಯ, ಪುಟ ೧-೨

೮. ಅದೇ. ಪುಟ. ೧೮-೧೯

೯. ಎಂ.ವಿ. ಚಕ್ರಪಾಣಿ, 'ಮುಳ್ಳುಪವಾಡ; ವಿಶಿಷ್ಟ ಆಚರಣೆ' (ಸಂ) ಜಿ.ಎಸ್. ಭಟ್. ಪುಟ. ೧೦೫-೧೦೬

೧೦. ಅದೇ. ಪುಟ. ೧೦೭

೧೧. ಸುಜಾತ ಅಕ್ಕಿ, ತಂಬ್ರಹಳ್ಳಿಯ ಬಂಡೇ ರಂಗನಾಥೇಶ್ವರ ಜಾತ್ರೆ - ಜಾನಪದೀಯ ಅಧ್ಯಯನ ಪುಟ. ೯೧-೯೨

## ಅಧ್ಯಾಯ ಐದು

# ಆಂಜನೇಯಸ್ವಾಮಿ ಮತ್ತು ಇತರ ದೈವದ ಸಂಬಂಧ

೫.೧ : ರಾಘವೇಂದ್ರ ಮಠ

೫.೨ : ಗವಿಸಿದ್ದೇಶ್ವರ ಮಠ

೫.೩ : ದುರುಗಮ್ಮ

೫.೪ : ಪಕ್ಕೀರಸ್ವಾಮಿ (ಮುಸ್ಲಿಂ ಜನಾಂಗ)

೫.೫ : ಊರಮ್ಮ

೫.೬ : ಹುಲಿಗೆಮ್ಮ

## ಅಧ್ಯಾಯ ೫

# ಆಂಜನೇಯಸ್ವಾಮಿ ಮತ್ತು ಇತರ ದೈವದ ಸಂಬಂಧ

ಕಡಲಬಾಳು ಗ್ರಾಮದಲ್ಲಿ ಆಂಜನೇಯನೇ ಪ್ರಧಾನ ದೈವ. ಆದರೆ ಆತನೊಬ್ಬನೇ ಇಲ್ಲಿ ದೈವವಲ್ಲ. ಆತನೊಂದಿಗೆ ಇನ್ನು ಹಲವಾರು ದೈವಗಳು ಈ ಊರಿನಲ್ಲಿವೆ. ಶ್ರೇಣೀಕರಣದ ದೃಷ್ಟಿಯಿಂದ ನೋಡಿದರೆ ಆಂಜನೇಯ ಎಲ್ಲಕ್ಕಿಂತ ಮೇಲೆ ಇದ್ದಾನೆ. ಅನಂತರ ಇತರ ದೈವಗಳು ಬರುತ್ತವೆ. ಜಾತ್ರೆಯಲ್ಲಿ ಆಂಜನೇಯನಿಗೆ ಪ್ರಧಾನ ಸ್ಥಾನ ನೀಡಿದರೂ ಉಳಿದ ದೈವಗಳಿಗೂ ಜನರು ಹರಕೆ ಒಪ್ಪಿಸುತ್ತಾರೆ. ಸೇವೆ ಮಾಡುತ್ತಾರೆ. ಈ ಗ್ರಾಮದಲ್ಲಿರುವ ಇತರ ದೈವಗಳೆಂದರೆ ರಾಘವೇಂದ್ರ, ಗವಿಸಿದ್ದೇಶ್ವರ, ದುರುಗಮ್ಮ, ಪಕ್ಕೀರಸ್ವಾಮಿ (ಮುಸ್ಲಿಂ) ಊರಮ್ಮ ಮತ್ತು ಹುಲಿಗೆಮ್ಮ. ಈ ದೈವಗಳಿಗೆ ಒಂದೊಂದು ಸ್ಥಾನವಿದೆಯಾದರೂ ಅವು ಆಂಜನೇಯ ದೇವಸ್ಥಾನದೊಂದಿಗೆ ನಿಕಟ ಸಂಬಂಧ ಹೊಂದಿವೆ.

ಸಾಮಾನ್ಯವಾಗಿ ಎಲ್ಲಾ ಊರುಗಳಲ್ಲಿ ದೈವಗಳ ಕಾರ್ತಿಕೋತ್ಸವವನ್ನು ಬೇರೆ ಬೇರೆ ಜನಾಂಗವದರು ಬೇರೆ ಬೇರೆ ದಿನಗಳಲ್ಲಿ ಆಚರಿಸುತ್ತಾರೆ. ಆದರೆ ಇಲ್ಲಿಯ ವಿಶೇಷವೇನೆಂದರೆ ಊರಿನ ಎಲ್ಲಾ ದೈವಗಳ ಕಾರ್ತಿಕೋತ್ಸವವನ್ನು ನಿಗದಿತ ದಿನಾಂಕದಂದು ಒಂದೇ ದಿನ ಆಚರಿಸುತ್ತಾರೆ. ಎಲ್ಲಾ ಜನಾಂಗದ ಮುಖಂಡರು ಸೇರಿ ಆ ದಿನಾಂಕವನ್ನು ನಿರ್ಧರಿಸುತ್ತಾರೆ. ಎಲ್ಲಾ ಜನಾಂಗದವರು ಆ ದಿನ ಹಬ್ಬದಂತೆ ಕಾರ್ತಿಕೋತ್ಸವವನ್ನು ಆಚರಿಸುತ್ತಾರೆ. ಇದರಿಂದ ನಾವು ಊರಿನಲ್ಲಿ ಭಾವೈಕ್ಯತೆಯ ಅಂಶವನ್ನು ಕಾಣುವುದರ ಜೊತೆಗೆ ಎಲ್ಲಾ ದೈವಗಳಿಗೂ ಸಮಾನ ಸ್ಥಾನಮಾನ ನೀಡಿರುವುದನ್ನು ಕಾಣಬಹುದು.

### ೫.೧. ರಾಘವೇಂದ್ರ ಮಠ

ಕಡಲಬಾಳು ಗ್ರಾಮದ ಪಶ್ಚಿಮ ದಿಕ್ಕಿನ ಕೋಟೆಯಲ್ಲಿ ರಾಘವೇಂದ್ರ ಸ್ವಾಮಿಗಳ ಮಠವಿದೆ. ೧೮ನೇ ಶತಮಾನದ ಆರಂಭದಲ್ಲಿಯೇ ಇಲ್ಲಿ ರಾಘವೇಂದ್ರ ಸ್ವಾಮಿಗಳ ವೃಂದಾವನವನ್ನು ಸ್ಥಾಪಿಸಲಾಗಿದೆ. ಇಲ್ಲಿ ವೃಂದಾವನ ಸ್ಥಾಪಿಸಲು ಪ್ರಮುಖ ಕಾರಣವಿದೆ.

ಕ್ರಿ.ಶ. ೧೮೧೦ ರಲ್ಲಿ ಹಲಾಲ್ದಾರ್ ಮುದ್ದುರಂಗಪ್ಪ (ಉಪನಾಯಕ)ನಿಗೆ ಜನ್ಮಾಂತರ ದುಷ್ಕರ್ಮದಿಂದ ಅನ್ನವೆಲ್ಲಾ ಹುಳಗಳಾಗಿ ಕಾಣಿಸತೊಡಿಗಿತು. ಈ ದುಃಖ ಶಾಂತಿಗಾಗಿ ಕಡಲಬಾಳಿನ ಆಂಜನೇಯ ಸ್ವಾಮಿಯ ಶರಣು ಹೋದನು. ಸ್ವಾಮಿಯು ಸ್ವಪ್ನದಲ್ಲಿ ಬಂದು "ಇದು ಬ್ರಹ್ಮಹತ್ಯಾ ದೋಷವು. ಇದು ಹೋಗಬೇಕಾದರೆ, ಈಗ ಜಗದಾನಿ ವಿಠಲಾಚಾರ್ಯರಿಂದ ಪೂಜೆಗೊಳ್ಳುತ್ತ ನಾರಾಯಣ

ದೇವರ ಕೆರೆಯಲ್ಲಿ ಇರುವ ಶ್ರೀ ಮಂತ್ರಾಲಯ ರಾಘವೇಂದ್ರ ಸ್ವಾಮಿಗಳ ವೃಂದಾವನ್ನು ಪೂಜಿಸು. ಅಲ್ಲದೇ ಅವರನ್ನು ಈ ಊರಿಗೆ ಕರೆತಂದು ಇಲ್ಲಿಯೇ ನೆಲೆಸುವಂತೆ ಮಾಡು" ಎಂದು ಅಪ್ಪಣೆಯಿತ್ತನು. ತಕ್ಷಣದಲ್ಲಿಯೇ ಮುದ್ದು ರಂಗಪ್ಪನು ನಾರಾಯಣ ದೇವರ ಕೆರೆಗೆ ಧಾವಿಸಿ, ಅರಮನೆಯವರ ಅಪ್ಪಣೆಯನ್ನು ಪಡೆದು, ಶ್ರೀ ಜಗದಾನಿ ವಿಠಲಾಚಾರ್ಯರನ್ನು ಶ್ರೀರಾಯರ ವೃಂದಾವನದೊಂದಿಗೆ ಕಡಲಬಾಳು ಗ್ರಾಮಕ್ಕೆ ಕರೆತಂದನು. ಶ್ರೀ ವೃಂದಾವನ ಸೇವೆ ಮತ್ತು ಶ್ರೀ ವಿಠಲಾಚಾರ್ಯರ ಸೇವೆ ಮಾಡುವುದರಿಂದ ಹವಾಲ್ದಾರ್ ಮುದ್ದು ರಂಗಪ್ಪನ ರೋಗವು ವಾಸಿಯಾಯಿತು. ಆಗ ಮುದ್ದುರಂಗಪ್ಪನಿಗೆ ಆದ ಆನಂದಕ್ಕೆ ಮಿತಿಯೇ ಇರಲಿಲ್ಲ. ಆಗ ಪರಮಭಕ್ತಿಯಿಂದ ಶ್ರೀರಾಯರಿಗೆ ಕ್ರಿ.ಶ. ೧೮೧೪ರಲ್ಲಿ ದಿವ್ಯರಥೋತ್ಸವ ನೆರವೇರಿಸಿದನು. ಕಡಲಬಾಳಲ್ಲಿ ಜರುಗಿದ ರಥೋತ್ಸವಗಳಲ್ಲೆಲ್ಲಾ ಇದೇ ಮೊದಲನೆಯದು.[೧]

೨೮.೮.೧೮೧೪ ಗುರುವಾರ ದಿನ ಪ್ರಥಮ ರಥೋತ್ಸವವನ್ನು ಕಡಲಬಾಳು ಕ್ಷೇತ್ರದಲ್ಲಿ ಆರಾಧಕರಾದ ಒಂದನೇ ವಿಠಲಾಚಾರ್ಯರು ಜರುಗಿಸಿದರು. ರಥೋತ್ಸವವನ್ನು ಎಲ್ಲಿ ಜರುಗಿಸಬೇಕೆಂಬ ಪ್ರಶ್ನೆ ಬಂದಾಗ ಆಚಾರ್ಯರು ಎಲ್ಲರ ಸಲಹೆ ಪಡೆದು ಆ ಊರಿನ ಅಧಿಷ್ಠಾತೃ ದೇವತೆಯಾದ ವಾಯುದೇವ ಕಡಲಬಾಳಪ್ಪನ ಗುಡಿಯ ಪ್ರಾಕಾರದಲ್ಲಿ ಆತನ ಗುಡಿಯ ಸುತ್ತಲೇ ನಡೆಸಬೇಕೆಂದು ತೀರ್ಮಾನ ಮಾಡಿದರು. ಅದರಂತೆಯೇ ಕೆಲವು ವರ್ಷ ಮಾಡಿದರು.[೨]

ರಾಯರ ಆರಾಧಕರಾದ ಎರಡನೇ ವಿಠಲಾಚಾರ್ಯರು ೧೪.೮.೧೯೧೩ರಲ್ಲಿ ನೂತನಶಿಲಾಮಯ ಮಠ ಕಟ್ಟಿಸಿ ರಾಯರ ವೃಂದಾವನವನ್ನು ಸ್ಥಾಪಿಸಿದರು. ೧೯೧೪ರಲ್ಲಿ ರಾಯರ ಗರ್ಭಗುಡಿಯ ಎದುರು ಮಂಟಪದ ಕಲ್ಲು ಮಂಟಪದಲ್ಲಿ ಮಾರುತಿ ವಿಗ್ರಹ ಸ್ಥಾಪಿಸಿದರು. ಅಂದಿನಿಂದ ಅಲ್ಲಿಯೇ ರಥೋತ್ಸವನ್ನು ಜರುಗಿಸಲಾಯಿತು.

ಮಠದ ಕಾರ್ಯ ಮುಗಿದು ವಿಠಲಾಚಾರ್ಯರು ಕಡಲಬಾಳು ಗ್ರಾಮದ ಉಳಿದ ಗುಡಿ-ಗುಂಡಾರಗಳ ಜೀರ್ಣೋದ್ಧಾರ ಕಾರ್ಯವನ್ನು ಕೈಕೊಂಡರು. ೧೯೧೪ರಲ್ಲಿ ಮೊಟ್ಟ ಮೊದಲಿಗೆ ಆಂಜನೇಯನ ಹಳೆಯದಾದ ಗುಡಿಯನ್ನು ಬಿಚ್ಚಿಸಿ ಶಿಲಾಮಯ ಗರ್ಭಗುಡಿಯನ್ನು ಅದರ ಮುಂದೆ ಒಂದು ಸಭಾಂಗಣವನ್ನು ಕಟ್ಟಿಸಲು ಏರ್ಪಾಡು ಮಾಡಿದರು. ಗುಡಿಯ ಪ್ರಕಾರದ ಬಲ ಬದಿ ಮೂಲೆಯಲ್ಲಿ ಒಂದು ಸಣ್ಣ ಛತ್ರವನ್ನು ಕಟ್ಟಿಸಿದರು. ಇದಾದ ನಂತರ ಊರಮ್ಮ, ಕಲ್ಲೇಶ್ವರ, ಮಸೂದೆಗಳನ್ನು ಕಲ್ಲಿನಿಂದ ಕಟ್ಟಿಸುವ ಏರ್ಪಾಡು ಮಾಡಿದರು.

ರಾಯರ ಆರಾಧಕರಾಗಿದ್ದ ಎರಡನೇ ವಿಠಲಾಚಾರ್ಯರು ವೈದಿಕರಾಗಿದ್ದರೂ ತಮ್ಮ ಮಠವೊಂದನ್ನೇ ಕಟ್ಟದೆ ಊರಿನ ಆಂಜನೇಯ ದೇವಸ್ಥಾನ ಮತ್ತು ಇತರೆ ದೇವಸ್ಥಾನಗಳನ್ನು ಎಲ್ಲಾ ಮತದವರ ಸಹಾಯ, ಸಹಕಾರದೊಂದಿಗೆ ಕಟ್ಟಿಸಿದರು. ಅವರು ಬಹುಮತ ಸಹಿಷ್ಣುಗಳಾಗಿದ್ದರು. ಅವರ ಮಾತನ್ನು ಎಲ್ಲಾ ಜನಾಂಗದವರು ಕೇಳುತ್ತಿದ್ದರು. ಆದ್ದರಿಂದಲೇ ಅವರ ಮುಖಂಡತ್ವದಲ್ಲಿ ಎಲ್ಲಾ ದೇವಸ್ಥಾನ ಗಳನ್ನು ಕಟ್ಟಿಸಲು ಸಾಧ್ಯವಾಯಿತು. ಮುಖ್ಯವಾದ ಹಬ್ಬದ ದಿನಗಳಲ್ಲಿ ಮತ್ತು ಆಂಜನೇಯನ ರಥೋತ್ಸವ ಸಂದರ್ಭದಲ್ಲಿ ರಾಮದೇವರ ಪೂಜೆಯನ್ನು ವೈದಿಕರೇ ಮಾಡುತ್ತಾರೆ ಮತ್ತು ರಾಮದೇವರ

ಮೂರ್ತಿಯನ್ನು ಅವರೇ ಹೊರಡಿಸುತ್ತಾರೆ. ಹಾಗೂ ಅವುಗಳೊಡನೆ ರಥದಲ್ಲಿ ವೈದಿಕರೇ ಕುಳಿತುಕೊಳ್ಳುತ್ತಾರೆ. ಆರಾಧನೆ ಸಂದರ್ಭದಲ್ಲಿ ಆಂಜನೇಯನ ದೇವಸ್ಥಾನಕ್ಕೆ ಉತ್ಸವಗಳನ್ನು ಸಹ ಹೊರಡಿಸುತ್ತಾರೆ. ಅಲ್ಲಿ ಆಂಜನೇಯನಿಗೆ ಪೂಜೆಸಲ್ಲಿಸಿ ಮಂಗಳಾರತಿ ಮಾಡಿಕೊಂಡು ಹೋಗುತ್ತಾರೆ. ಮಂತ್ರಾಲಯದ ರಾಘವೇಂದ್ರಸ್ವಾಮಿಗಳು ಗುರುಗಳು ಸಹ ಆಂಜನೇಯ ಆಗಿದ್ದನು. ಹೀಗೆ ರಾಘವೇಂದ್ರ ಮಠ ಮತ್ತು ಆಂಜನೇಯಸ್ವಾಮಿಗೆ ನಿಕಟಸಂಬಂಧವಿದೆ.

## ೫.೨. ಗವಿಸಿದ್ದೇಶ್ವರ ಮಠ

ಕೊಪ್ಪಳದ ಗವಿಮಠವು ೬೩ಕ್ಕೂ ಹೆಚ್ಚು ಶಾಖಾಮಠಗಳನ್ನು ಹೊಂದಿದೆ. ಕಡಲಬಾಳು ಗ್ರಾಮದಲ್ಲಿಯೂ ಶಾಖಾಮಠವಿದೆ. ಈ ಮಠವು ಹಿಂದೆ ನೂರಾರು ಎಕರೆ ಜಮೀನು ಹೊಂದಿತ್ತು. ಕೊಪ್ಪಳ ಶ್ರೀ ಗವಿಮಠಕ್ಕೆ ಪೀಠಾಧಿಪತಿಗಳಾಗಿರುವವರು ಕಡಲಬಾಳು ಗ್ರಾಮದ ಶಾಖಾಮಠಕ್ಕೆ ಬಂದು ಹೋಗುತ್ತಿದ್ದರು. ಗವಿಮಠದ ೧೫ನೇ ಪಿಠಾಧಿಪತಿಗಳಾದ ಲಿಂ.ಶ್ರೀ.ಮ.ನಿ.ಪ್ರ. ಶ್ರೀ ಶಿವಶಾಂತವೀರ ಸ್ವಾಮಿಗಳು (ಗಡ್ಡದಜ್ಜ) ಶ್ರೀ ಗವಿಮಠದ ಕಾರ್ಯ ಕ್ಷೇತ್ರವನ್ನು ವಿಸ್ತಾರಗೊಳಿಸಿದರು. ಪಂಡಿತರಿಗೆ, ಕಲಾವಿದರಿಗೆ ಆಶ್ರಯ ನೀಡಿದರು. ಜಾತಿ-ಮತಗಳನ್ನೆಣಿಸದೆ ಸಹಾಯ ನೀಡಿದರು. ಬಳ್ಳಾರಿ ಜಿಲ್ಲೆಯ ಕಡಲಬಾಳು ಇವರ ಅತ್ಯಂತ ಒಲುಮೆಯ ಕ್ಷೇತ್ರ.[೩]

ಇವರು ಕಡಲಬಾಳು ಗ್ರಾಮದಲ್ಲಿಯೇ ಹೆಚ್ಚು ವಾಸವಾಗಿದ್ದರು. ೧೯೧೪ರಲ್ಲಿ ಆಂಜನೇಯ ದೇವಸ್ಥಾನವನ್ನು ಕಟ್ಟಿಸಲು ಇವರೂ ಸಹ ಊರಿನ ತಮ್ಮ ಶಿಷ್ಯಂದಿರಿಗೆ ತನು, ಮನ, ಧನಗಳಿಂದ ಸಹಾಯ ಮಾಡುವಂತೆ ಹೇಳಿದರು. ದೇವಸ್ಥಾನದ ಕೆಲಸವನ್ನು ಉಚಿತವಾಗಿ ಮಾಡುವಂತೆ ಸಲಹೆ ನೀಡಿದರು. ಇವರ ಮಾತನ್ನು ಜನರು ಕೇಳುತ್ತಿದ್ದರು. ದೇವಸ್ಥಾನ ಕಟ್ಟುವ ಕಾರ್ಯಕ್ಕೆ ನೆರವಾಗುವಂತೆ ಜನರನ್ನು ಹುರಿದುಂಬಿಸಿದರು. ಇವರ ಆಶ್ವಾಸನೆ ದೊರೆತ ಮೇಲೆಯೇ ವಿಠಲಾಚಾರ್ಯರು ದೇವಸ್ಥಾನಗಳನ್ನು ಕಟ್ಟಿಸುವ ಕಾರ್ಯಕ್ಕೆ ಕೈ ಹಾಕಿದರು. ೧೯೨೦ರಲ್ಲಿ ಇವರು ಕಡಲಬಾಳಿನಲ್ಲಿಯೇ ಮರಣ ಹೊಂದಿದರು. ವಿಠಲಾಚಾರ್ಯರ ಸಲಹೆಯಂತೆ ಸ್ವಾಮಿಗಳ ದೇಹವನ್ನು ಕೊಪ್ಪಳಕ್ಕೆ ಒಯ್ದು ಅವರ ಗುದ್ದುಗೆಯನ್ನು ಕಡಲಬಾಳು ಗ್ರಾಮದಲ್ಲಿ ಮಾಡಿದ್ದಾರೆ. ಈಗಲೂ ಆ ಗದ್ದುಗೆ ಪೂಜೆಗೊಳ್ಳುತ್ತಿದೆ.

ಪ್ರತಿ ವರ್ಷ ಸೀಗೆಹುಣ್ಣಿಮೆ ದಿನ ಊರನಲ್ಲಿ ಗವಿಸಿದ್ದೇಶ್ವರನ ರಥೋತ್ಸವ ಜರುಗುತ್ತದೆ. ಆ ದಿನ ಉಚಿತ ಸಾಮೂಹಿಕ ವಿವಾಹಗಳು ಇರುತ್ತವೆ. ರಥೋತ್ಸವದ ಕಾರ್ಯಕ್ರಮಗಳು ಮತ್ತು ಸಾಮೂಹಿಕ ವಿವಾಹಗಳನ್ನು ಊರಿನ ಎಲ್ಲಾ ಜನಾಂಗದ ಮುಖಂಡರು ಸೇರಿ ಪಟ್ಟಿ ಮೂಲಕ ಹಣ ಸಂಗ್ರಹಿಸಿ ನೆರವೇರಿಸುತ್ತಾರೆ. ರಥೋತ್ಸವಕ್ಕೆ ಬಂದ ಭಕ್ತಾಧಿಗಳಿಗೆ ಅನ್ನದಾಸೋಹದ ವ್ಯವಸ್ಥೆ ಇರುತ್ತದೆ.

## ೫.೩. ದುರುಗಮ್ಮ

ಆಂಜನೇಯ ಎಲ್ಲಾ ಜನಾಂಗದ ದೇವರಾದರೆ ದುರುಗಮ್ಮ ಹರಿಜನರ ಪ್ರಮುಖ ದೇವತೆ. ಆದ್ದರಿಂದಲೇ ಆಂಜನೇಯ ಊರಲ್ಲಿಯೂ, ದುರುಗಮ್ಮ ಕೇರಿಯಲ್ಲಿಯೂ ಸ್ಥಾಪಿತವಾಗಿದ್ದಾರೆ. ಇಬ್ಬರೂ ಬೇರೆ ಬೇರೆ ಇದ್ದರೂ ಅವರನ್ನು ಜನರು ಕಾಣುವ ಸಂಬಂಧ ಬಹಳ ಹತ್ತಿರವಾಗಿದೆ. ಆಂಜನೇಯನನ್ನು ಅಣ್ಣನೆಂದು ದುರುಗಮ್ಮನನ್ನು ತಂಗಿ ಎಂದು ಪುರಾತನ ಕಾಲದಿಂದಲೂ ಜನರು ಭಾವಿಸಿದ್ದಾರೆ. ಆಂಜನೇಯನ ದೇವಸ್ಥಾನಕ್ಕೆ ಹರಿಜನರು ಪ್ರತಿ ಶನಿವಾರ ತಪ್ಪದೇ ಬರುತ್ತಾರೆ ಮತ್ತು ಕೆಲವರು ತಮ್ಮ ಹರಕೆಯನ್ನು ಒಪ್ಪಿಸುತ್ತಾರೆ. ಊರಿನ ಜನರು ಸಹ ವಿಶೇಷ ಸಂದರ್ಭಗಳಲ್ಲಿ ದುರುಗಮ್ಮನ ದೇವಸ್ಥಾನಕ್ಕೆ ಹೋಗುತ್ತಾರೆ. ಊರಿನ ಪಕ್ಕದ ಬ್ಯಾಲಾಳು ಎಂಬ ಗ್ರಾಮದಲ್ಲಿ ದುರುಗಮ್ಮನ ಹಬ್ಬವನ್ನು ವರ್ಷಕ್ಕೊಮ್ಮೆ ಎಲ್ಲಾ ಜನಾಂಗದವರು ಹಬ್ಬದಂತೆ ಆಚರಿಸುವುದನ್ನು ನಾವು ಇಂದಿಗೂ ಕಾಣಬಹುದು.

ಊರಿನ ಹರಿಜನ ಜನಾಂಗದವರು ಹಬ್ಬ-ಹರಿದಿನಗಳಲ್ಲಿ ಆಂಜನೇಯನ ದೇವಸ್ಥಾನ ಆವರಣದ ಕಸಗೂಡಿಸುವ ಕಾಯಕವನ್ನು ಇಂದಿಗೂ ಮಾಡುತ್ತಾರೆ. ರಥೋತ್ಸವ ಸಂದರ್ಭದಲ್ಲಿ ಎಲ್ಲರೂ ಸ್ವಾಮಿಯ ಸೇವೆಯಲ್ಲಿ ಪಾಲ್ಗೊಳ್ಳುತ್ತಾರೆ. ಆಂಜನೇಯ ಸ್ವಾಮಿಗೆ ಪಾದರಕ್ಷೆಗಳನ್ನು ಈ ಜನಾಂಗದ ಕಟ್ಟೆಪ್ಪನವರ ಮನೆತನದವರು ತಯಾರಿಸಿ ಕೊಡುತ್ತಾರೆ. ಆ ಪಾದರಕ್ಷೆಗಳನ್ನು ದೇವಸ್ಥಾನದ ಆವರಣದಲ್ಲಿ ಪ್ರತ್ಯೇಕ ಜಾಗದಲ್ಲಿ ಇರಿಸಲಾಗುತ್ತದೆ. ಇಂದಿಗೂ ಈ ಜನಾಂಗದ ಮಹಿಳೆಯರು ಹನುಮಪ್ಪನನ್ನು ಕುರಿತು ಹಾಡುವ ಹಾಡುಗಳು ಅವರ ದೈವಭಕ್ತಿಗೆ ಜೀವಂತ ಸಾಕ್ಷಿಯಾಗಿವೆ.

ಅಂಜನೇಯ ಸ್ವಾಮಿ ಪಾಲಕಿಯಲ್ಲಿ ಹೊಳೆಗೆ ಹೋಗುವ ಸಂದರ್ಭದಲ್ಲಿ, ಊರಿನ ಪಕ್ಕದ ಸಣ್ಣ ಗುಡ್ಡಕ್ಕೆ ಪಾಲಕಿಯಲ್ಲಿ ಹೋಗುವ ಸಂದರ್ಭದಲ್ಲಿ ಮತ್ತು ಸ್ವಾಮಿಯ ರಥೋತ್ಸವದ ಸಂದರ್ಭದಲ್ಲಿ ದುರುಗಮ್ಮ ಪೂಜಾರಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಾನೆ. ಮತ್ತು ರಥೋತ್ಸವದ ದಿನ ದುರುಗಮ್ಮನ ಪೂಜಾರಿ ಉಪವಾಸ ಇರುತ್ತಾನೆ. ದುರುಗಮ್ಮನನ್ನು ಹೊಳೆಗೆ ಕರೆದುಕೊಂಡು ಹೋಗುವ ಸಂದರ್ಭದಲ್ಲಿ ಹನುಮಪ್ಪನ ಪೂಜಾರಿ ಸಹ ಭಾಗವಹಿಸುತ್ತಾನೆ. ಇದರಿಂದ ನಮಗೆ ಅವರಿಬ್ಬರ ಸಂಬಂಧ ತಿಳಿದು ಬರುತ್ತದೆ. ಹಿಂದಿನ ಕಾಲದಿಂದಲೂ ಈ ಪದ್ಧತಿ ನಡೆದುಕೊಂಡು ಬಂದಿದೆ. ಯಾವುದೇ ಧಾರ್ಮಿಕ ಕಾರ್ಯದಲ್ಲಿ ಒಬ್ಬರನ್ನು ಬಿಟ್ಟು ಮತ್ತೊಬ್ಬರು ಭಾಗವಹಿಸುವುದಿಲ್ಲ. ಇದರಿಂದ ನಾವು ಎರಡು ದೈವಗಳು ಎರಡು ಜನಾಂಗಗಳನ್ನು ಧಾರ್ಮಿಕ ನೆಲೆಯಲ್ಲಿ ಒಂದುಗೂಡಿಸುವ ಅಂಶವನ್ನು ಕಾಣಬಹುದು.

## ೫.೪. ಪಕ್ಕೀರಸ್ವಾಮಿ (ಮುಸ್ಲಿಂ ಜನಾಂಗ)

ಊರಿನಲ್ಲಿರುವ ಇನ್ನೊಂದು ಪ್ರಮುಖ ಜನಾಂಗವೆಂದರೆ ಮುಸ್ಲಿಂರು. ಅವರದು ಊರಲ್ಲಿ ಪಕ್ಕೀರ ಸ್ವಾಮಿಯ ಮಸೀದಿ ಇದೆ. ಹಳ್ಳಿಗಳು ಇಂದಿಗೂ ಹಿಂದೂ ಮತ್ತು ಮುಸ್ಲಿಂರ ಭಾವೈಕ್ಯತೆಯ ಪ್ರತೀಕವಾಗಿವೆ. ಹಳ್ಳಿವಾಸಿ ಹಿಂದುಗಳು ಮುಸ್ಲಿಂರ ಆಚರಣೆ ಪ್ರಭಾವಕ್ಕೆ ಒಳಗಾಗಿರುವುದು ಸತ್ಯ. ಹಾಗೆಯೇ ಮುಸ್ಲಿಂರು ಸಹ ಯುಗಾದಿ, ನಾಗರಪಂಚಮಿ ಮತ್ತು ದಸರಾ ಮೊದಲಾದ ಹಬ್ಬ-

ಹರಿದಿನಗಳಿಗೆ ಮಾರು ಹೋಗಿರುವರು. ಇವರು ಸಹ ಹಬ್ಬಗಳಲ್ಲಿ ಆಂಜನೇಯನ ಗುಡಿಗೆ ಬರುತ್ತಾರೆ. ಆದರೆ ನೈವೇದ್ಯ, ಹಣ್ಣು ಕಾಯಿಗಳನ್ನು ತರುವುದಿಲ್ಲ. ಜಾತ್ರೆಯ ದಿನ ಮನೆಯಲ್ಲಿ ಎಲ್ಲರೂ ಹಬ್ಬವನ್ನು ಮಾಡುತ್ತಾರೆ. ರಥೋತ್ಸವ ಸಂದರ್ಭದಲ್ಲಿ ಮುಸ್ಲಿಂ ಜನಾಂಗದವರು ಸ್ವಾಮಿಯ ವಿವಿಧ ಸೇವೆಯನ್ನು ಮಾಡುತ್ತಾರೆ. ಊರಲ್ಲಿ ಮುಸ್ಲಿಂ ಜನಾಂಗದ ಹಬ್ಬಗಳಿಗೆ ಹಿಂದುಗಳು, ಹಿಂದುಗಳ ಹಬ್ಬಗಳಿಗೆ ಮುಸ್ಲಿಂರು ಹಣವನ್ನು ಪಟ್ಟಿಯ ಮುಖಾಂತರ ಕೊಡುತ್ತಾರೆ.

ಮುಸ್ಲಿಂರ ಮೊಹರಾಂ ಹಬ್ಬವನ್ನು ಊರಲ್ಲಿ ಬೇರೆ ಜಾತಿಯವರು ಸಹ ಆಚರಿಸುತ್ತಾರೆ. ದೇವರಿಗೆ ನೈವೇದ್ಯ ಮಾಡಿಸಿಕೊಂಡು ಬರುತ್ತಾರೆ. ದೇವರಿಗೆ ಬೇಡಿಕೊಂಡವರು ಹರಕೆಗಳನ್ನು ಒಪ್ಪಿಸುತ್ತಾರೆ. ಅವುಗಳಲ್ಲಿ ಪ್ರಮುಖವಾದದು ಈ ಹಬ್ಬದಲ್ಲಿ ಹಲವಾರು ವೇಷಗಳನ್ನು ಹಾಕುವುದು. ಕೆಲವು ಮನೆಯವರು ಫಕೀರರು ಆಗಿ ತಮ್ಮ ಮುಂಗೈ ಹಾಗೂ ಕೊರಳಲ್ಲಿ ಲಾಡಿಗಳನ್ನು ಸಹ ಧರಿಸುತ್ತಾರೆ. ಹಿಂದೂಗಳು ಮತ್ತು ಮುಸ್ಲಿಂರು ಸೇರಿಯೇ ಈ ಹಬ್ಬವನ್ನು ಆಚರಿಸುತ್ತಾರೆ. ಈ ಹಬ್ಬಕ್ಕೆ ಊರಿನ ಎಲ್ಲಾ ಜನರಿಂದ ಪಟ್ಟಿಯ ಮೂಲಕ ಹಣ ಸಂಗ್ರಹಿಸುತ್ತಾರೆ. ಈಗಲೂ ಊರಲ್ಲಿ ನಾಯಕ ಜನಾಂಗದ ಕನ್ನಿಹಳ್ಳಿ ಮಹಾದೇವಪ್ಪ ಮತ್ತು ಮಡಿವಾಳರ ಬಸಪ್ಪ ಮುಸ್ಲಿಂರ ಹಬ್ಬಗಳಲ್ಲಿ ಸವಾಲು ಪದ ಹೇಳುವುದನ್ನು ನಾವು ಕಾಣಬಹುದು. ಮುಸ್ಲಿಂರು ಇಲ್ಲದ ಊರುಗಲ್ಲಿಯೂ ಸಹ ಹಿಂದುಗಳು ಮೊಹರಾಂ ಹಬ್ಬ ಆಚರಿಸುವುದನ್ನು ಕಾಣಬಹುದು. ಓಗಾಗಿ ನಾವು ಬಹುತೇಕ ಹಳ್ಳಿಗಳಲ್ಲಿ ಹಿಂದು ಮುಸ್ಲಿಂರ ಭಾವೈಕ್ಯತೆಯನ್ನು ಇಂದಿಗೂ ಕಾಣಬಹುದಾಗಿದೆ.

## ೫.೫. ಊರಮ್ಮ

ಊರಿನ ಗ್ರಾಮದೇವತೆ ಊರಮ್ಮ. ಈಕೆಯ ದೇವಸ್ಥಾನ ರಾಘವೇಂದ್ರ ಮಠದ ಹತ್ತಿರದಲ್ಲಿ ಪೂರ್ವ ದಿಕ್ಕಿಗೆ ಇದೆ. ರಾಘವೇಂದ್ರ ಸ್ವಾಮಿಗಳ ಆರಾಧನೆಯಲ್ಲಿ ರಥಾರೋಹಣ ಮಾಡುವ ಮುನ್ನ ಈ ಜಗದಂಬೆಗೆ ವಂದಿಸಿ ಆಕೆಯ ಅಪ್ಪಣೆ ಪಡೆದೇ ಶ್ರೀರಾಯರು ರಥಾರೋಹಣ ಮಾಡುತ್ತಾರೆ.[೪] ಈಕೆಯು ಸಹ ಆಂಜನೇಯ ತಂಗಿ ಎಂದು ಜನರು ಭಾವಿಸಿದ್ದಾರೆ. ಈಗಿನ ದೇವಸ್ಥಾನವು ವಿಠಲಾಚಾರ್ಯರ ಕಾಲದಲ್ಲಿ ನಿರ್ಮಾಣ ಆಗಿದೆ.

ಈಕೆಯ ಹಬ್ಬವನ್ನು ಊರಲ್ಲಿ ಆಚರಿಸುವುದಿಲ್ಲ. ಏಕೆಂದರೆ ಹಿಂದೆ ಈಕೆಯ ಹಬ್ಬ ಆಚರಿಸುವಾಗ ಈ ಊರಿನ ಉಲುಸು ಹಗರಿ ಕ್ಯಾದ್ಗಿಹಳ್ಳಿಗೆ ಹೋಗಿದೆ. ಹಬ್ಬ ಆಚರಿಸುವ ಸಂದರ್ಭದಲ್ಲಿ ಕೋಣವನ್ನು ಬಲಿಕೊಡುವಾಗ ಕೋಣದ ರುಂಡವನ್ನು ಕತ್ತರಿಸಿದರೂ ಸಹ ಅದು ಹಾಗೆಯೇ ಓಡಿ ಹೋಗಿ ಆ ಊರಲ್ಲಿ ಬಿದ್ದಿದೆ. ಅದರ ನೆನಪಿಗಾಗಿ ಆ ಊರಿನವರು ಗುಡಿ ಕಟ್ಟಿಸಿದ್ದಾರೆ. ಅದಕ್ಕಾಗಿ ಆಂಜನೇಯ ಈ ಹಬ್ಬ ಆಚರಿಸಲು ಅನುಮತಿ ಕೊಡುವುದಿಲ್ಲ ಎಂದು ಹೇಳುತ್ತಾರೆ. ಮಳೆಗಾಲ ಪ್ರಾರಂಭವಾಗುವುದಕ್ಕಿಂತ ಮುಂಚಿತವಾಗಿ ಈಕೆಯ ಉಡಿ ತುಂಬುತ್ತಾರೆ. ಈಕೆಯ ಉಡಿ ತುಂಬದೇ ಯಾರು ಹೊಲದಲ್ಲಿ ಉಳುಮೆ ಮಾಡುವುದಿಲ್ಲ ಮತ್ತು ಬಿತ್ತುವುದಿಲ್ಲ. ಈಕೆಯ ಪೂಜೆಯನ್ನು ಬಡಿಗೇರು (ವಿಶ್ವಕರ್ಮ) ಮನೆತನದವರು ಮಾಡುತ್ತಾರೆ.

## ೫.೬. ಹುಲಿಗೆಮ್ಮ

ಹುಲಿಗೆಮ್ಮನ ಮೂಲ ರಾಯಚೂರು ಜಿಲ್ಲೆಯ ಕೊಪ್ಪಳ ತಾಲೂಕಿನ ತುಂಗಭದ್ರಾನದಿ ದಂಡೆಯಲ್ಲಿರುವ ಕ್ಷೇತ್ರವಾಗಿದೆ. ಹುಲಿಗೆಮ್ಮನನ್ನು ಮನೆ ದೈವವಾಗಿ ಪೂಜಿಸುವವರು ಉತ್ತರ ಕರ್ನಾಟಕದಾದ್ಯಂತ ತಮ್ಮ ಮನೆಯಲ್ಲಿ ಈ ದೈವವನ್ನು ಇರಿಸಿಕೊಳ್ಳುತ್ತಾರೆ. ಸುಮಾರು ಒಂದು ಲಕ್ಷಕ್ಕೂ ಹೆಚ್ಚು ಜನರ ಮನೆಯಲ್ಲಿ ಈ ದೈವ ಇರುವುದು ಕಂಡು ಬರುತ್ತದೆ.[೫]

ಎಲ್ಲಾ ಊರುಗಳಲ್ಲಿ ಹುಲಿಗೆಮ್ಮನ ದೇವಸ್ಥಾನಗಳು ಕಂಡು ಬರುವುದಿಲ್ಲ. ಕಡಲಬಾಳು ಗ್ರಾಮದಲ್ಲಿ ಊರಿಂದ ಸ್ವಲ್ಪ ದೂರದ ಹೊಲದಲ್ಲಿ ಹುಲಿಗೆಮ್ಮನ ಒಂದು ಚಿಕ್ಕ ಗುಡಿ ಇದೆ. ಎಲ್ಲಾ ಜನಾಂಗದವರಿಗೆ ಪ್ರಚಲಿತ ಅಲ್ಲಿದ್ದರೂ ನಾಯಕ ಜನಾಂಗದ ಬ್ಯಾಟೇರು ಮನೆತನದವರು ಪ್ರತಿ ಮೂರು ವರ್ಷಕ್ಕೊಮ್ಮೆ ಈಕೆಯ ಹಬ್ಬ ಮಾಡುತ್ತಾರೆ. ಕುರಿಗಳನ್ನು ಬಲಿಕೊಟ್ಟು ಬಂದ ಭಕ್ತರಿಗೆ ಅಲ್ಲಿಯೇ ಊಟವನ್ನು ಮಾಡಿಸುತ್ತಾರೆ. ಹುಲಿಗೆಮ್ಮನ ಹಬ್ಬದಲ್ಲಿ ದೇವರನ್ನು ಹೊರಡಿಸಿದಾಗ ಮೊದಲಿಗೆ ಆಂಜನೇಯನ ದೇವಸ್ಥಾನಕ್ಕೆ ಹೋಗಿ ದರ್ಶನ ತೆಗೆದುಕೊಂಡು ಬರುತ್ತಾರೆ. ಕೆಲವು ನಾಯಕ ಮನೆತನದವರಿಗೆ ಹುಲಿಗೆಮ್ಮ ಮತ್ತು ಆಂಜನೇಯ ಇಬ್ಬರೂ ಮನೆ ದೇವರಾಗಿದ್ದಾರೆ. ಮೂಲ ಹುಲಿಗೆಮ್ಮನ ದೇವಸ್ಥಾನದ ಜಾತ್ರೆಗೆ ಈ ಮನೆತನದವರೆಲ್ಲರೂ ಹೋಗುತ್ತಾರೆ. ಹರಕೆಗಳನ್ನು ಒಪ್ಪಿಸುತ್ತಾರೆ. ಆಕೆಗೆ ಹೂವು, ಹಣ್ಣು, ಕಾಯಿ ಮುಂತಾದ ಕಾಣಿಕೆ ಅರ್ಪಿಸುತ್ತಾರೆ. ಹರಕೆ ಹೊತ್ತವರು ಕುರಿ, ಟಗರುಗಳನ್ನು ಬಲಿಕೊಟ್ಟು ಅಲ್ಲಿಯೇ ಊಟ ಮಾಡಿ ಮನೆಗೆ ವಾಪಾಸು ಬರುತ್ತಾರೆ.

ಹೀಗೆ ಆಂಜನೇಯನೊಂದಿಗೆ ಊರಿನ ಇತರ ದೈವಗಳ ಸಂಬಂಧವನ್ನು ಕಾಣಬಹುದು. ಊರಿನ ಎಲ್ಲಾ ದೈವಗಳ ಹಬ್ಬಗಳನ್ನು ಜನರು ಒಂದಾಗಿ ಆಚರಿಸುವುದರಿಂದ ಭಾವೈಕ್ಯತೆಯನ್ನು ಕಾಣಲು ಸಾಧ್ಯ. ಇಲ್ಲದಿದ್ದರೆ ಜಾತಿ ಕಲಹಕ್ಕೆ ಕಾರಣವಾಗುತ್ತದೆ.



## ಅಡಿಟಿಪ್ಪಣಿಗಳು

೧. ಗೋವಿಂದಾಚಾರ್ಯ ಪಂಡಿತ, ಚಿಕ್ಕೇರೂರ. ಶ್ರೀ ಕಡಲಬಾಳು ರಾಯರ ಚರಿತ್ರೆ, ಪುಟ. ೩

೨. ಕೆ. ಪ್ರಹ್ಲಾದಾಚಾರ್ಯ. ಕಡಲಬಾಳು ರಾಯರ ಚರಿತ್ರೆ, ಪುಟ. ೫೧

೩. ಹೆಚ್.ಎಸ್. ಪಾಟೇಲ. 'ಕೊಪ್ಪಳ ಶ್ರೀ ಗವಿಮಠದ ಪರಂಪರೆ ಮತ್ತು ಶಾಖಾಮಠಗಳು' ಗವಿದೀಪ್ತಿ (ಸಂ) ಪುಟ ೩೦೫

೪. ಕೆ. ಪ್ರಹ್ಲಾದಾಚಾರ್ಯ. ಕಡಲಬಾಳು ರಾಯರ ಚರಿತ್ರೆ, ಪುಟ. ೧೧೪

೫. ಡಾ. ಪುರುಷೋತ್ತಮ ಬಿಳಿಮಲೆ. ಹುಲಿಗೆಮ್ಮ, ಪುಟ. ೨

# ಅಧ್ಯಾಯ ೬

# ಆಂಜನೆಯ ಸ್ವಾಮಿ ಕುರಿತ ನಂಬಿಕೆ ಮತ್ತು ಹರಕೆಗಳು

## ನಂಬಿಕೆಗಳು

ನಂಬಿಕೆ ಎಂಬುದು ನಾಮಪದವಾಗಿದೆ. 'ನಂಬು' ಎನ್ನುವ ಧಾತುವಿಗೆ 'ಇಕೆ' ಎಂಬ ಪ್ರತ್ಯಯ ಸೇರಿ ಈ ಪದ ಉಂಟಾಗಿದೆ.

'ಒಂದು ವಸ್ತುವಿನ ಅಥವಾ ವಿಷಯದ ಮೇಲೆ ವಿಶ್ವಾಸವಿಟ್ಟು ಆ ಬಗೆಗೆ ಹೇಳುವ ಮಾತನ್ನು ನಂಬಿಕೆ ಎನ್ನಬಹುದು' ಸತ್ಯ ಸಂಗತಿಯಾಗಿರುವ ವಾಸ್ತವಿಕತೆಯು ನಂಬಿಕೆ ಎನಿಸುವುದಿಲ್ಲ ಎಂಬ ಮಾತುಗಳಲ್ಲಿ ನಂಬಿಕೆಯ ಬಗೆಗಿನ ಸಂಪೂರ್ಣವಿವರ ಸೇರಿಕೊಂಡಿದೆ. ಈ ನಂಬಿಕೆ ಬಗ್ಗೆ ಪುರುಷೋತ್ತಮ ಬಿಳಿಮಲೆ ಅವರು ವ್ಯಕ್ತಿಮತ್ತು ಸಮಾಜವು ಪರಂಪರಾಗತವಾಗಿ ಒಪ್ಪಿಕೊಂಡು ಅನುಸರಿಸುತ್ತಾ ಬರುತ್ತಿರುವ ವರ್ತನೆಗಳನ್ನು ನಾವು ನಂಬಿಕೆಗಳೆಂದು ಕರೆಯುತ್ತೇವೆ. ವೈಚಾರಿಕ ದೃಷ್ಟಿಗಿಂತ ಭಾವುಕ ದೃಷ್ಟಿ ಹೆಚ್ಚು ಇರುವಲ್ಲಿ ನಂಬಿಕೆಗಳು ಪ್ರಬಲವಾಗಿರುತ್ತವೆ. ವಿದ್ಯಾವಂತ, ಅವಿದ್ಯಾವಂತ ವೇಲ್ವರ್ಗ, ಕೆಳವರ್ಗದಂಥ ವ್ಯತ್ಯಾಸಗಳು ಇಲ್ಲಿ ಕಡಿಮೆ. ನಂಬಿಕೆಗಳು ವ್ಯಕ್ತಿಯ ಮನಸ್ಸಿನ ಪರಿಸ್ಥಿತಿಗೆ ಸಂಬಂಧಿಸಿರುವುದರಿಂದ ಅವುಗಳು ಸಾರ್ವತ್ರಿಕವಾಗಿವೆ ಎಂದು ಅಭಿಪ್ರಾಯ ಪಟ್ಟಿದ್ದಾರೆ.[೧]

ನಂಬಿಕೆಗಳು ಮಾನವನ ಜೀವನದಲ್ಲಿ ಅತೀ ಮುಖ್ಯವಾದ ಪಾತ್ರವನ್ನು ವಹಿಸುತ್ತವೆ. ಮನುಷ್ಯನ ಜೀವನ ನಡೆಯುವುದೇ ನಂಬಿಕೆಗಳಿಂದ ಈ ನಂಬಿಕೆಗಳು ಹಲವಾರು ರೀತಿಯಲ್ಲಿ ಪೂರಕವೂ, ಸಹಾಯಕವೂ ಆಗುತ್ತವೆ. ನಮ್ಮ ಜನಪದರಲ್ಲಿ ನಂಬಿಕೆಯೇ ಪ್ರಧಾನ. ನಂಬಿಕೆಯೇ ಸರ್ವಸ್ವವನ್ನು ಸ್ಥಿರೀಕರಿಸುತ್ತದೆ. ದೇವರ ಮೇಲಿನ ನಂಬಿಕೆ ಇನ್ನೂ ಅರ್ಥವಂತಿಕೆಯನ್ನು ಪಡೆದಿರುತ್ತದೆ.

'ನಂಬಿಕೆಗಳು ಜನತಾ ಭಾವದ ಅಭಿವ್ಯಕ್ತಿ. ಜನತೆಯ ಪರಂಪರಾನುಗತ ಜ್ಞಾನಸುಧೆ; ಸುಸಂಸ್ಕೃತ ಹೃದಯದ ಪರಿಪಕ್ವ ಅನುಭವ ಸಾರವೆನ್ನಬಹುದು.'[೨]

ಭಕ್ತರು ಆಂಜನೇಯನನ್ನು ಬಹಳ ನಿಷ್ಠೆಯಿಂದ ನಂಬುತ್ತಾರೆ. ಮತ್ತು ನಿತ್ಯವೂ ಪೂಜಿಸುತ್ತಾರೆ. ಈ ದೇವರನ್ನು ನಂಬಿದರೆ ನಮ್ಮ ಕಷ್ಟಗಳನ್ನು ಪರಿಹಾರ ಮಾಡುತ್ತಾನೆ ಎಂದು ಜನಪದರು ನಂಬುತ್ತಾರೆ. ಹನುಮಂತನಲ್ಲಿ ಜನಪದರ ಹಲವಾರು ನಂಬಿಕೆಗಳಿವೆ. ಹನುಮಂತನು ಬಹು ಪೂರ್ವ ಕಾಲದಿಂದಲೇ

ಬಂಜೆಯರಿಗೆ ಮಕ್ಕಳನ್ನು ಕೊಡುವ ದೇವರೆಂದು ನಂಬಲಾಗುತ್ತದೆ. ನಮ್ಮಲ್ಲಿ ನಡುರಾತ್ರಿಯಲ್ಲಿ ಬೆತ್ತಲೆಯಾಗಿ ಹನುಮಂತ ದೇವರಿಗೆ ಪೂಜೆಸಲ್ಲಿಸಿದರೆ, ಮಕ್ಕಳಾಗುವವು ಎಂಬ ಮೂಢನಂಬಿಕೆಯಿದೆ.

ಬಹು ಕಾಲದಿಂದಲೂ ನಂಬಿಕೊಂಡು ಬಂದಿರುವ ಇನ್ನೊಂದು ನಂಬಿಕೆ ಏನೆಂದರೆ ಹನುಮಂತನು ಉಳುವವರ ದೇವರಾಗಿದ್ದು ಅವರ ಫಲ ಕಾಪಾಡುವ ದೈವವಾಗಿದ್ದಾನೆ. ಈಗಲೂ ರೈತರು ರಾಶಿ ಮಾಡುವ ಸಮಯದಲ್ಲಿ ಕಣದಲ್ಲಿ ಕರಿಬಂಟನ ಗುರುತು ಹಾಕುತ್ತಾರೆ. ಈ ಕರಿಬಂಟ ಹನುಮಂತನ ಪ್ರತೀಕವೆಂದು ಹೇಳುತ್ತಾರೆ.

ಚೆಲುವಾದ ಮುದ್ದು ಮಗುವಿಗೆ ದೃಷ್ಟಿ ತಟ್ಟದಿರಲೆಂದು, ತಾಯಿ ತನ್ನ ಮಗುವನ್ನು ಹನುಮಪ್ಪನ ದೇವಸ್ಥಾನಕ್ಕೆ ಒಯ್ದು, ಆತನ ಮೇಲೆ ಎಣ್ಣೆ ಸುರುವಿ, ಮೈ ಮೇಲಿರುವ ಜಿಗುಟು ಕಪ್ಪು ಮಸಿಯನ್ನು ಪ್ರಸಾದವೆಂದು ತನ್ನ ಮಗುವಿನ ಹಣೆಗೂ, ಕೆನ್ನೆಗೂ ಹಚ್ಚುತ್ತಾಳೆ. ಇದರಿಂದ ತನ್ನ ಮಗುವಿಗೆ ಯಾವ ಕೇಡೂ ಬಾರದು ಎಂಬುದು ಮುತ್ತೈದೆಯ ನಂಬುಗೆ.[೩]

ದೆವ್ವ ಬಡಿದು ಕೊಂಡವರು ಅವುಗಳನ್ನು ಹೋಗಲಾಡಿಸುವುದಕ್ಕಾಗಿ ಹನುಮಪ್ಪನ ಮೂರ್ತಿ ಇರುವ ಬಿಲ್ಲೆ, ತಾಯಿತಗಳನ್ನು ಕರಿಯದಾರದಲ್ಲಿ ಪಣಿಸಿ ಕಟ್ಟಿಕೊಳ್ಳುತ್ತಾರೆ. ಹನುಮಂತನು ಶನಿಯನ್ನು ಗೆದ್ದವನಾದುದರಿಂದ ನಮಗೆ ಅನಿಷ್ಟಗಳು ಕಾಡ ಹತ್ತಿದರೆ, ಹನುಮಂತನ ಪೂಜೆ, ಅಭಿಷೇಕ ಮಾಡಿದರೆ ಕಾಪಾಟಗಳು ದೂರವಾಗುತ್ತವೆ ಎಂದು ನಂಬುತ್ತಾರೆ ಮತ್ತು ಶನಿವಾರಕ್ಕೊಮ್ಮೆ ಹನುಮಂತ ದೇವರಿಗೆ ನಡೆದುಕೊಂಡರೆ ಅನಿಷ್ಟಗಳು ತಪ್ಪುತ್ತವೆ. ಹನುಮಂತನ ಅಂಗಾರವನ್ನು ಬಟ್ಟೆಯಲ್ಲಿ ಹಾಕಿ ಸೊಂಟಕ್ಕೆ ಕಟ್ಟಿಕೊಂಡರೆ ದೆವ್ವ ಸಮೀಪ ಬರುವುದಿಲ್ಲ, ಹೆಣ್ಣು ಮಕ್ಕಳು ಹನುಮಪ್ಪನ ಪೂಜೆ ಮಾಡಿದರೆ ಬೇಗ ಮದುವೆ ಆಗುತ್ತದೆ. ಮನದಲ್ಲಿ ಅಂದುಕೊಂಡಂತಹ ಇಷ್ಟಾರ್ಥಗಳನ್ನು ನೆರವೇರಿಸುತ್ತಾನೆ ಎಂಬ ನಂಬಿಕೆಗಳಿವೆ.

'ತಿರುಪತಿಯ ನರಸಿಂಹಸ್ವಾಮಿಯ ಬೆಟ್ಟದಲ್ಲಿಯೇ ಬ್ರಹ್ಮಚಾರಿ ವೀರಾಂಜನೇಯಸ್ವಾಮಿಯ ದೇವಾಲಯವಿದೆ. ಈತ ಜನರ ಎದೆಗೆ ಕೆಚ್ಚನ್ನು ತುಂಬುತ್ತಾನೆ. ಸ್ವಾಮಿಗೆ ನಿತ್ಯ ಪೂಜೆ ಉಂಟು. ಗಾಳಿದೆವ್ವಗಳು ಮೈಮೇಲೆ ಬರುವವರು ಇಲ್ಲಿ ಪೂಜೆ ಮಾಡಿಸಿದಾಗ ಆ ಗಾಳಿದೆವ್ವಗಳನ್ನು ತನ್ನ ಪಾದದಲ್ಲಿ ಹಾಕಿಕೊಳ್ಳುತ್ತಾನಂತೆ. ಮತ್ತೆ ಅವರಿಗೆ ಎಂದೆಂದಿಗೂ ಆ ಗಾಳಿದೆವ್ವಗಳು ಮೈ ಮೇಲೆ ಬರುವುದಿಲ್ಲವಂತೆ. ಎಂಬ ನಂಬಿಕೆ ನಮ್ಮ ಜನತೆಯಲ್ಲಿದೆ. ಎಷ್ಟೋ ಜನರು ಈ ಸತ್ಯ ಸಂಗತಿಯನ್ನು ಕಂಡುಂಡವರಾಗಿದ್ದಾರೆ. ಬೆಟ್ಟಕ್ಕೆ ಹೋದವರು ಇಲ್ಲಿ ಪೂಜೆ ಸಲ್ಲಿಸಲೇ ಬೇಕು. ಇಲ್ಲದಿದ್ದರೆ ಕನಸಿನಲ್ಲಿ ಕಪಿಯಾಗಿ ಬಂದು ಕೊಂಚ ಬೆದರಿಸುತ್ತಾನೆ. ಆಗ ಭಕ್ತರಿಗೆ ತಮ್ಮ ತಪ್ಪುತಿಳಿದು ಮುಡುಪು ಕಟ್ಟಿಕೊಳ್ಳುತ್ತಾರೆ. ಮತ್ತೆಂದೂ ಮರೆಯದೆ ಪೂಜೆಸಲ್ಲಿಸುತ್ತಾರೆ'.[೪]

ಕಡಲಬಾಳು ಆಂಜನೇಯ ಸ್ವಾಮಿಗೆ ಜಾತ್ರೆಯ ಸಂದರ್ಭದಲ್ಲಿ ಹರಿಜನರ ಕಟ್ಟೆಪ್ಪನವರ ಮನೆತನದವರು ಹೊಸ ಪಾದರಕ್ಷೆಗಳನ್ನು ತಯಾರಿಸಿ ಕೊಡುತ್ತಾರೆ. ಆಂಜನೇಯ ಅವುಗಳನ್ನು ಧರಿಸಿಕೊಂಡು ಊರಲೆಲ್ಲಾ ಓಡಾಡುತ್ತಾ ಊರನ್ನು ಕಾಯುತ್ತಾನೆ ಎನ್ನುವ ನಂಬಿಕೆ ಜನರಲ್ಲಿದೆ. ಆ

ಪಾದ ರಕ್ಷೆಗಳನ್ನು ದೇವಸ್ಥಾನದ ಆವರಣದ ಪ್ರತ್ಯೇಕ ಸ್ಥಳದಲ್ಲಿ ಇಡಲಾಗಿದೆ. ಅವುಗಳ ಪೂಜೆಯನ್ನು ಸಹ ಭಕ್ತರು ಮಾಡುತ್ತಾರೆ. ಸ್ವಲ್ಪ ದಿನಗಳು ಕಳೆದ ನಂತರ ಆ ಪಾದರಕ್ಷೆಗಳು ಸವೆದು ಹರಿದಿರುತ್ತವೆ. ಇದರಿಂದ ಆಂಜನೇಯ ಪಾದರಕ್ಷೆಗಳನ್ನು ಧರಿಸಿ ಊರಲೆಲ್ಲಾ ಓಡಾಡಿದ್ದಾನೆ ಎಂದು ಹೇಳುತ್ತಾರೆ. ಹೀಗೆ ಆಂಜನೇಯ ಗ್ರಾಮವನ್ನು ರಕ್ಷಿಸಿ ಜನರನ್ನು ಕಾಪಾಡುತ್ತಾನೆ ಎನ್ನುವ ನಂಬಿಕೆ ಸಹ ಜನರಲ್ಲಿದೆ.

## ಹರಕೆಗಳು

ತಮ್ಮನ್ನು ಕಾಪಾಡುವ ದೇವತೆಗಾಗಿ ಜನರು ಏನು ತ್ಯಾಗ ಮಾಡಲೂ ಸಿದ್ಧ. ಯಾವ ಕಷ್ಟ ಅನುಭವಿಸಲೂ ಹಿಂಜರಿಯುವುದಿಲ್ಲ. ಅದಕ್ಕಾಗಿ ನಾನಾರೀತಿಯ ಹರಕೆ ಕಟ್ಟಿಕೊಂಡು ನಿಯತ್ತಿನಿಂದ ಹರಕೆ ತೀರಿಸುತ್ತಾರೆ. ಹರಕೆ ತೀರಿಸದಿದ್ದರೆ ಏನೆಲ್ಲ ಕಷ್ಟಪ್ರಾಪ್ತವಾಗುತ್ತದೆ ಎಂಬ ಭಯ ಜನರನ್ನು ಆವರಿಸಿದೆ."

ಹನುಮಂತನ ಮೇಲೆ ಇಟ್ಟಿರುವ ನಂಬಿಕೆಗಳ ಹಿನ್ನಲೆಯಲ್ಲಿ ಭಕ್ತರು ಆಂಜನೇಯನಿಗೆ ಬಗೆಬಗೆಯ ಹರಕೆಗಳನ್ನು ಒಪ್ಪಿಸುತ್ತಾರೆ ವೈಯುಕ್ತಿಕವಾಗಿ ಕಷ್ಟಬಂದವರು ಅಂಥ ಕಷ್ಟ ತೀರುವುದಕ್ಕಾಗಿ ದೈವಕ್ಕೆ ಹರಕೆ ಒಪ್ಪಿಸುತ್ತಾರೆ. ಆಂಜನೇಯನಿಗೆ ಒಪ್ಪಿಸುವ ಹರಕೆಗಳನ್ನು ಕೆಳಕಂಡಂತೆ ಪಟ್ಟಿ ಮಾಡಬಹುದು.

೧. ತೆಂಗಿನ ಕಾಯಿ ಒಡೆಸುವುದು
೨. ಉರುಳು ಸೇವೆ ಮಾಡುವುದು
೩. ದೈವಕ್ಕೆ ಬೆಳ್ಳಿ ಮತ್ತು ಬಂಗಾರದ ಸಾಮಾನುಗಳನ್ನು ಮಾಡಿಸುವುದು
೪. ದೈವಕ್ಕೆ ವಿವಿಧ ಬಗೆಯ ಆಯುಧಗಳನ್ನು ಮಾಡಿಸಿ ಅರ್ಪಿಸುವುದು
೫. ದೀಡ ನಮಸ್ಕಾರ ಹಾಕುವುದು
೬. ಉಪವಾಸ ಮಾಡುವುದು
೭. ದೈವಕ್ಕೆ ಮೀಸಲು ಹಾಕುವುದು
೮. ಅಗ್ನಿಕೊಂಡದಲ್ಲಿ ಹೋಗುವುದು
೯. ಅಭಿಷೇಕ ಮಾಡಿಸುವುದು
೧೦. ಹಣವನ್ನು ಕಾಣಿಕೆಯಾಗಿ ಹುಂಡಿಗೆ ಹಾಕುವುದು
೧೧. ಆಂಜನೇಯನಿಗೆ ಕುಂಕುಮ ಪೂಜೆ ಕಟ್ಟಿಸುವುದು
೧೨. ಆಂಜನೇಯನಿಗೆ ಎಲೆ ಪೂಜೆ ಕಟ್ಟಿಸುವುದು
೧೩. ಕಾರ್ತಿಕ (ದೀಪ) ಹಚ್ಚುವುದು
೧೪. ಛತ್ರಿ, ಚಾಮರಗಳನ್ನು ಕೂಡಿಸುವುದು
೧೫. ತೇರಿನ ಸಾಮಾನುಗಳನ್ನು ಕೂಡಿಸುವುದು

೧೬. ದೇವಸ್ಥಾನಕ್ಕೆ ಬೇಕಾದ ವಿವಿಧ ಸೌಕರ್ಯಗಳನ್ನು ಪೂರೈಸುವುದು

೧೭. ಉತ್ಸವ ಸಮಯದಲ್ಲಿ ಮೂರ್ತಿಯ ಪಾಲಕಿ ಹೋರುವುದು

೧೮. ಪಟ್ಟಿಯ ರೂಪದಲ್ಲಿ ಹಣ ನೀಡುವುದು

೧೯. ದೈವಕ್ಕೆ ದೊಡ್ಡ ಹೂವಿನ ಹಾರವನ್ನು ಹಾಕುವುದು

೨೦. ಆಂಜನೇಯನಿಗೆ ಕೆಂಪು ಬಣ್ಣದ ಚೆಡ್ಡಿ ಹೊಲಿಸಿ ಕೊಡುವುದು

೨೧. ಹಳ್ಳಿಗಳಿಂದ ಬರಿಗಾಲಲ್ಲಿ ಬರುವುದು

೨೨. ತಾವು ಅಂದುಕೊಂಡ ದಿನಗಳಂದು ದೇವರಿಗೆ ಬರುವುದು

೨೩. ಅಂಜನೇಯನ ಪಾದರಕ್ಷೆಗಳನ್ನು ತಲೆಯ ಮೇಲೆ ಹೊತ್ತುಕೊಂಡು ದೇವಸ್ಥಾನದ ಪ್ರದಕ್ಷಿಣೆ ಹಾಕುವುದು

೨೪. ದಾಸಯ್ಯನವರಿಗೆ ದಾಸೋಗ ನೀಡಿಸುವುದು.

ಹೀಗೆ ನಾನಾ ರೀತಿಯ ಹರಕೆ ಕಟ್ಟಿಕೊಂಡು ಭಯ ಭಕ್ತಿಯಿಂದ ಪೂರೈಸುತ್ತಾರೆ. ದೈಹಿಕವಾಗಿ, ಮಾನಸಿಕವಾಗಿ, ಆರ್ಥಿಕವಾಗಿ, ಕಷ್ಟವಾದರೂ ಸಹಿಸಿಕೊಳ್ಳುತ್ತಾರೆ. ಅನುಕೂಲಸ್ಥರು ದುಂದು ವೆಚ್ಚ ಮಾಡುವರು. ದೇವರಿಗೆ ಖರ್ಚು ಮಾಡುವುದಕ್ಕೆ ಜನರು ಜಿಪುಣರಾಗುವುದಿಲ್ಲ. ತಾವು ಹಸಿದಿದ್ದರೂ, ಸಾಲಮಾಡಿಯಾದರೂ ದೇವರ ಸೇವೆ ಮಾಡುವವರಿದ್ದಾರೆ.



## ಅಡಿಟಿಪ್ಪಣಿಗಳು

೧. ಪಿ. ಗಣಪತಿ ಭಟ್. ತುಳುನಾಡಿನ ಜಾನಪದ ನಂಬಿಕೆಗಳು, ಪುಟ ೧೯

೨. ಜಿ.ವಿ. ದಾಸೇಗೌಡ. ನಮ್ಮ ಜನಪದ ನಂಬಿಕೆಗಳು, ಪುಟ. ೨

೩. ವೀರಣ್ಣ ದಂಡೆ. ಕನ್ನಡ ಜಾನಪದ ಪ್ರಜ್ಞೆ, ಪುಟ. ೩೧೭-೩೧೮

೪. ಜಿ.ವಿ. ದಾಸೇಗೌಡ. ಕನ್ನಡ ಐತಿಹ್ಯಗಳು, ಪುಟ. ೩೮-೩೯

೫. ಡಿ. ಲಿಂಗಯ್ಯ. ಕರ್ನಾಟಕದ ಗ್ರಾಮದೇವತೆಗಳು, ಪುಟ. ೪೦

# ಅಧ್ಯಾಯ ೭

# ಆಂಜನೇಯಸ್ವಾಮಿ ಕುರಿತ ಸಾಹಿತ್ಯ

## ೭.೧ ಗಾದೆ

ಜನಪದ ಪ್ರಾಚೀನ ಹೇಳಿಕೆಗಳಿಗೆ ಸಾಮಾನ್ಯವಾಗಿ 'ಗಾದೆ' ಎಂದು ಕರೆಯುವುದು ವಾಡಿಕೆಯಾಗಿದೆ. ಇದಕ್ಕೆ ಸಂವಾದಿಯಾಗಿ ಕನ್ನಡದಲ್ಲಿ 'ನಾಣ್ನುಡಿ' ಎಂಬ ಮತ್ತೊಂದು ಹೆಸರಿದೆ. ಮೊದಮೊದಲು 'ನಾಣ್ನುಡಿ' ಎಂಬುದೇ ಪ್ರಚಾರದಲ್ಲಿದ್ದು ಅನಂತರ 'ಗಾದೆ' ಎಂಬುದು ಬಂದಿರಬೇಕೆಂದು ತೋರುತ್ತದೆ. ಈಗ ಪ್ರಚಲಿತದಲ್ಲಿರುವ 'ಗಾದೆ' ಎಂಬ ಮಾತಿಗೆ ಸಂಸ್ಕೃತ ಪದ 'ಗಾಥಾ' ಎಂಬುದು ಮೂಲವಾಗಿದ್ದು ಕನ್ನಡ ಸಾಹಿತ್ಯಕ್ಕೆ ಜನಜೀವನಕ್ಕೆ ಸಂಸ್ಕೃತ ಮತ್ತು ಪ್ರಾಕೃತಗಳ ಸಾಂಸ್ಕೃತಿಕ ಸಂಬಂಧದಿಂದ ಈ ಪದದ ಆಗಮನವಾಗಿರಬೇಕು. ಹೀಗೆ ಆಗಮನವಾಗುವಾಗ ಗಾದೆ, ಗಾಥಾ ಶಬ್ದದ ನೇರ ತದ್ಭವವಾಗಿರಬೇಕು. ಗಾದೆಗೆ ಸಂವಾದಿಯಾಗಿ ಇನ್ನು ಅನೇಕ ಮಾತುಗಳು ಬಳಕೆಯಾಗಿವೆ. ಅವುಗಳೆಂದರೆ ಲೋಕೊಕ್ತಿ, ಪ್ರಾಚೀನೋಕ್ತಿ, ಸೂಕ್ತಿ, ಸಾಮತಿ, ಸೂತ್ರ, ಉದ್ಧರಣೆ, ನಿಯಮ, ಪ್ರಾಮಾಣ, ಇತ್ಯಾದಿಯಾಗಿ ಗಾದೆಯನ್ನು ಕರೆಯಲಾಗುತ್ತದೆ.[೧]

ಗಾದೆ ಸಮಾಜದ ಸಂಸ್ಕೃತಿಯ ಕಸವನ್ನು ಗುಡಿಸುತ್ತದೆ. ಮಕ್ಕಳಲ್ಲಿ ಗಾದೆ ಇರುವುದಿಲ್ಲ. ಅನುಭವಸ್ಥರಲ್ಲಿ, ಹಿರಿಯರಲ್ಲಿಯೇ ಹೆಚ್ಚು ಗಾದೆ ಮಾತುಗಳು ಇರುತ್ತವೆ. ಗಾದೆಗಳು ಅನುಭವದ ಅಮೃತ. ಗಾದೆಗಳು ಸಮಯಕ್ಕೆ ತಕ್ಕಂತೆ ಸಹಜವಾಗಿ ಹೊರಹೊಮ್ಮುತ್ತವೆ.

ನಮ್ಮ ಜನಪದರು ಮಾತನಾಡುವ ಸಂದರ್ಭದಲ್ಲಿಯೂ ಸಹ ಹನುಮಪ್ಪನ ಮುಖ ಮತ್ತು ಬಾಲಕ್ಕೆ ಹೋಲಿಸುತ್ತಾರೆ. ನಮ್ಮ ಜನಪದರು ಆಂಜನೇಯನ ಮೇಲೆ ಹತ್ತಾರು ಗಾದೆಗಳನ್ನು ಕಟ್ಟಿ ಆತನನ್ನು ತಮ್ಮ ಹೃದಯಕ್ಕೂ, ನಾಲಿಗೆಗೂ ಸಮೀಪವಾಗಿ ಇರಿಸಿ ಕೊಂಡಿದ್ದಾರೆ. ಅವುಗಳಲ್ಲಿ ಕೆಲವು ಹೀಗಿವೆ.

೧. ಊರು ಸುಟ್ಟರೂ ಹನುಮಪ್ಪ ಊರ ಹೊರಗೆ

೨. ಹನುಮಂತರಾಯ ಹಗ್ಗತಿಂದರೆ ಪೂಜಾರಯ್ಯ ಶಾವಿಗೆ ಬಯಸಿದನಂತೆ

೩. ಮೊದಲ ದೇವರು ಮೂಲೇಲಿದ್ದರೂ ಹನುಮಂತರಾಯನಿಗೆ ದೀಪೋತ್ಸವ

೪. ಕೇರಿಗೊಬ್ಬ ಹನುಮಪ್ಪ ಊರಿಗೊಂದು ಜಾತ್ರೆ

೫. ಹನುಮಂತನ ಮುಂದೆ ಹಾರೋ ಗುಬ್ಬಿಯೇ?

೬. ಊರಿಗೊಬ್ಬ ಹನುಮಪ್ಪ ನೀರಿಗೊಂದು ಕೆರೆ

೭. ಹಾಳೂರಿಗೆ ಉಳಿದವನೆ ಹನುಮಪ್ಪ.

## ೭.೨ ಕಥೆ

ಜನಪದ ಕಥನಗಳಲ್ಲಿ ಜನಪದ ಕಥೆ, ಪುರಾಣ, ಕಾವ್ಯ, ಹಾಗೂ ಐತಿಹ್ಯಗಳನ್ನು ಸೇರಿಸಿ ಪ್ರತ್ಯೇಕವಾದ ಒಂದು ಗುಂಪನ್ನು ತಯಾರಿಸಿದವರು ಆರ್.ಎಸ್. ಬಾಗ್ಸ್ ಎಂಬ ಜನಪದ ತಜ್ಞರು. ಕಥೆಯು ಮೌಖಿಕವಾಗಿ ಸಂವಹನಗೊಂಡು ಪರಂಪರಾಗತವಾಗಿ ಹರಿದು ಬಂದಿರುವುದನ್ನು ನಾವು ಜನಪದ ಕಥೆ ಎನ್ನುತ್ತೇವೆ. ಈ ಜನಪದ ಕಥೆಯನ್ನು ಇಂಗ್ಲೀಷ್‌ನಲ್ಲಿ 'Folktale' ಎಂದು ಕರೆಯುತ್ತಾರೆ. ಈ ಮಾತು ವಿಶಾಲವಾದ ಅರ್ಥದಲ್ಲಿ ಕಥನರೂಪಗಳನ್ನು ಒಳಗೊಂಡಿದೆ. ಜನಪದ ಕಥೆಗಳು ನಮ್ಮಲ್ಲಿ ಹೆಚ್ಚಾಗಿ 'ಅಜ್ಜಿ ಕಥೆಗಳು' ಎಂದು ಪ್ರಖ್ಯಾತವಾಗಿವೆ. ಕಥೆಯನ್ನು ಮುಖ್ಯವಾಗಿ ವಾಚಿಕ ಮತ್ತು ಗ್ರಂಥಿಕ ಎಂದು ಎರಡು ಭಾಗವಾಗಿ ಮಾಡಬಹುದು. ಕಥೆ ಹೇಳುವ ಮತ್ತು ಕೇಳುವ ಕ್ರಿಯೆಯು ಮಾನವ ಇರುವ ಕಡೆಯಲ್ಲೆಲ್ಲಾ ನಿರಂತರವಾಗಿ ಸಾಗುತ್ತಾ ಬಂದಿದೆ. ಆದ್ದರಿಂದ ಇಡೀ ವಿಶ್ವದ ಎಲ್ಲ ಕಥೆಗಳಲ್ಲಿಯೂ ಕಾಣಬರುವ ಒಂದು ಲಕ್ಷಣವೆಂದರೆ 'ಸಮರೂಪತೆ' ಇದಕ್ಕೆ ಕಥೆಗಳು ಒಂದು ಕಡೆಯಿಂದ ಮತ್ತೊಂದು ಕಡೆಗೆ ಪ್ರಯಾಣ ಮಾಡುವುದು ಕಾರಣವಾಗಿರಬಹುದು.[೨]

ಕಡಲಬಾಳು ಆಂಜನೇಯಸ್ವಾಮಿಯ ಕುರಿತು ಹಲವಾರು ಕಥೆಗಳನ್ನು ಊರಿನ ಹಿರಿಯರು ಹೇಳುತ್ತಾರೆ. ಆದರೆ ಇಲ್ಲಿ ಕೆಲವು ಕಥೆಗಳನ್ನು ಮಾತ್ರ ಸಂಗ್ರಹಿಸಲಾಗಿದೆ.

೧. ಬಹಳ ಹಿಂದಿನ ಕಾಲದಲ್ಲಿ ಕಡಲಬಾಳು ಗ್ರಾಮದ ಪಶ್ಚಿಮ ದಿಕ್ಕಿನಲ್ಲಿರುವ ಕೋಟೆಯಲ್ಲಿ ಬ್ರಹ್ಮ ರಾಕ್ಷಸ ವಾಸವಾಗಿತ್ತು. ಅದು ರಾತ್ರಿ ಹನ್ನೆರಡು ಗಂಟೆಯ ನಂತರ ಊರಲೆಲ್ಲಾ ತಿರುಗಾಡಿ ಒಬ್ಬರನ್ನಾದರೂ ಬಲಿ ತೆಗೆದು ಕೊಳ್ಳುತ್ತಿತ್ತು. ಇದರಿಂದ ಜನರು ಭಯಭೀತರಾಗಿ ರಾತ್ರಿ ಸಮಯದಲ್ಲಿ ಹೊರಗಡೆ ಓಡಾಡುತ್ತಿರಲಿಲ್ಲ. ಜನರಿಗೆ ಇದೊಂದು ಬಗೆಹರಿಸಲಾಗದ ದೊಡ್ಡ ಸಮಸ್ಯೆಯಾಯಿತು. ಆ ಸಮಯದಲ್ಲಿ ಊರಲ್ಲಿ ಆಂಜನೇಯಸ್ವಾಮಿಯ ಮಹಿಮೆ ದೊಡ್ಡದಿತ್ತು. ಆಗಲೇ ದಾಸಯ್ಯನು ನಾಲಗೆ ಪವಾಡ ಮಾಡಿ ಆಂಜನೇಯನ ಪರಮ ಭಕ್ತನಾಗಿದ್ದು ಸುತ್ತ ಮುತ್ತ ಹಳ್ಳಿಗೆಲ್ಲಾ ಪ್ರಸಿದ್ಧಿಯನ್ನು ಪಡೆದಿದ್ದನು.

ರಾಕ್ಷಸ ಊರಲ್ಲಿ ದಿನಕ್ಕೊಬ್ಬರಂತೆ ಬಲಿ ತೆಗೆದು ಕೊಳ್ಳುವುದನ್ನು ನೋಡಿ ದಾಸಯ್ಯನಿಗೆ ತುಂಬಾ ದುಃಖವಾಯಿತು. ಆತ ಆಂಜನೇಯ ಸ್ವಾಮಿಯಲ್ಲಿ 'ನೀನೇ ಈ ಕಷ್ಟದಿಂದ ಊರಿನ ಜನರನ್ನು ಕಾಪಡಬೇಕು' ಎಂದು ಮೊರೆ ಇಟ್ಟನು. ನಂತರ ಆಂಜನೇಯಸ್ವಾಮಿಯು ದಾಸಯ್ಯನ ಕನಸಿನಲ್ಲಿ ಬಂದು 'ನಾನು ಆ ರಾಕ್ಷಸನನ್ನು ಊರು ಬಿಟ್ಟು ಓಡಿಸುತ್ತೇನೆ. ಅದಕ್ಕಾಗಿ ಒಂದು ಕುರುಹು ಹೇಳುತ್ತೇನೆ.

ಅದೇನೆಂದರೆ ನೀನು ಮನೆಯಲ್ಲಿ ಹತ್ತಿ ಹರಳೆಯ ಗದ್ದಿಗೆ ಮಾಡಿ ರಾತ್ರಿ ಅದರ ಮೇಲೆ ಕುಳಿತಿರು. ರಾಕ್ಷಸನು ಈ ಊರು ಬಿಟ್ಟು ಓಡಿಹೋದರೆ ಆ ಅರಳಿಗದ್ದಿಗೆಗೆ ಏನೂ ಆಗಿರುವುದಿಲ್ಲ' ಎಂದು ಹೇಳಿದನು.

ಅದರಂತೆ ಮರುದಿನ ರಾತ್ರಿ ದಾಸಯ್ಯನು ಮನೆಯಲ್ಲಿ ಹತ್ತಿ ಹರಳೆಯ ಗದ್ದಿಗೆ ಮಾಡಿ ಅದರ ಮೇಲೆ ಕುಳಿತು ಕೊಂಡನು ಇತ್ತ ಆಂಜನೇಯಸ್ವಾಮಿಯು ದೇವಸ್ಥಾನದಲ್ಲಿದ್ದ. ತನ್ನ ಕತ್ತರಿಬಾಣವನ್ನು ತೆಗೆದುಕೊಂಡು ಆ ರಾಕ್ಷಸನಿದ್ದ ಸ್ಥಳದತ್ತ ಧಾವಿಸಿದನು. ಆ ರಾಕ್ಷಸ ಕೋಟೆಯ ಹಳ್ಳಿ ಮರದ ಮೇಲೆ ವಾಸವಾಗಿತ್ತು. ಆಂಜನೇಯ ಕತ್ತರಿ ಬಾಣವನ್ನು ಹಿಡಿದುಕೊಂಡು ಬರುವುದನ್ನು ನೋಡಿ ಹೆದರಿದ ರಾಕ್ಷಸ ಅಲ್ಲಿಂದ ಊರ ಮುಂದಿನ ಪೂರ್ವ ದಿಕ್ಕಿನ ಪಾದಗಟ್ಟೆ ಹನುಮಪ್ಪನ ಹತ್ತಿರದಲ್ಲಿರುವ ಆಲದ ಮರದ ಮೇಲೆ ಹಾರಿ ಕಾಲಿಟ್ಟಾಗ ಆ ಆಲದ ಮರದ ದೊಡ್ಡದಾದ ಕೊಂಬೆ ಮುರಿದುಬಿತ್ತು. ಆ ಶಬ್ದ ಮಲಗಿದ ಊರಿನ ಜನತೆಗೆ ಕೇಳಿ ಎಲ್ಲರೂ ಭಯಭೀತರಾದರು. ಆ ರಾಕ್ಷಸ ಅಲ್ಲಿಂದ ಮುಂದೆ ಬೇರೆ ಕಡೆ ಹೋಯಿತು.

ಇತ್ತ ಮನೆಯಲ್ಲಿ ಅರಳಿಗದ್ದಿಗೆ ಮೇಲೆ ಕುಳಿತುಕೊಂಡಿದ್ದ ದಾಸಯ್ಯನಿಗೂ ಈ ಶಬ್ದ ಕೇಳಿಸಿತು. ಆಂಜನೇಯಸ್ವಾಮಿ ಹೇಳಿದಂತೆ ಆತ ಕುಳಿತುಕೊಂಡಿದ್ದ ಅರಳಿಗದ್ದಿಗೆ ಸ್ವಲ್ಪವೂ ಕೆಲಗಡೆ ಸರಿದಿರಲಿಲ್ಲ. ಮರುದಿನ ದಾಸಯ್ಯನು ಊರಿನ ಜನತೆಗೆ ಹಿಂದಿನ ದಿನ ನಡೆ ಘಟನೆಯನ್ನು ವಿವರಿಸಿದನು. ದಾಸಯ್ಯನ ಭಕ್ತಿಗೆ ಊರಿನ ಜನತೆ ಕೊಂಡಾಡಿದರು. ಅಂದಿನಿಂದ ಊರಲ್ಲಿ ಯಾವುದೇ ರಾಕ್ಷಸನ ಕಾಟ ಇಲ್ಲದಂತಾಗಿ ಜನರು ಶಾಂತಿಯಿಂದ ಜೀವನ ಮಾಡಿದರು.

೨. ಕಡಲಬಾಳು ಆಂಜನೇಯ ಸ್ವಾಮಿಯ ಭಕ್ತರು ಹಲವಾರು ಗ್ರಾಮಗಳಲ್ಲಿ ಇದ್ದಾರೆ. ಅವುಗಳಲ್ಲಿ ಕೆಚ್ಚಿನಮರಡಿ ಗ್ರಾಮವೂ ಒಂದು. ಅಲ್ಲಿ ಕುರುಬರ ಕರಿದೊಡ್ಡಪ್ಪನು ಆಂಜನೇಯನ ಪರಮಭಕ್ತನಾಗಿದ್ದನು. ಆತ ಪ್ರತಿಶನಿವಾರ ಆಂಜನೇಯನ ಪಾಲಕಿ ಉತ್ಸವಕ್ಕೆ ಡೊಳ್ಳನ್ನು ತೆಗೆದುಕೊಂಡು ಬಂದು ಪಾಲಕಿಯ ಉತ್ಸವದ ಸಮಯದಲ್ಲಿ ಪಾಲಕಿಯ ಮುಂದೆ ಬಾರಿಸುತ್ತಿದ್ದನು. ಈ ರೀತಿ ಒಂದು ವಾರವೂ ತಪ್ಪದಂತೆ ಬಂದು ಸ್ವಾಮಿಗೆ ತನ್ನ ಸೇವೆಯನ್ನು ಸಲ್ಲಿಸುತ್ತಿದ್ದನು.

ಒಮ್ಮೆ ಶನಿವಾರ ರಾತ್ರಿ ಡೊಳ್ಳನ್ನು ತೆಗೆದುಕೊಂಡು ಒಬ್ಬಂಟಿಯಾಗಿ ಹೋಗುವುದನ್ನು ಕಳ್ಳರು ನೋಡಿದರು. ದಾರಿಯಲ್ಲಿ ಈತನನ್ನು ತಡೆದು ಡೊಳ್ಳನ್ನು ತಮಗೆ ಕೊಡುವಂತೆ ಒತ್ತಾಯಿಸಿದರು. ಆದರೆ ಈತ ಒಪ್ಪಲಿಲ್ಲ. ಕಳ್ಳರು ಬಿಡಲಿಲ್ಲ ಕೊನೆಗೆ ಕರಿದೊಡ್ಡಪ್ಪನು ತನ್ನ ಕರಿ ಕಂಬಳಿಯನ್ನು ಹಾಸಿ ಡೊಳ್ಳನ್ನು ಅದರ ಮೇಲಿಟ್ಟು ಮನದಲ್ಲಿ ಆಂಜನೇಯನನ್ನು ಸ್ಮರಿಸಿ ತೆಗೆದುಕೊಂಡು ಹೋಗುವಂತೆ ತಿಳಿಸಿದನು. ಆತನ ಮಾತಿನಂತೆ ಕಳ್ಳರು ಡೊಳ್ಳನ್ನು ತೆಗೆದುಕೊಳ್ಳಲು ಹೋದರು. ಡೊಳ್ಳು ನೆಲಬಿಟ್ಟು ಮೇಲೇಳಲಿಲ್ಲ. ನಾಲ್ಕು ಜನರು ಸೇರಿ ಎತ್ತಲು ಹೋದರು. ಅದು ಸ್ವಲ್ಪವೂ ಅಲುಗಾಡಲಿಲ್ಲ. ಅವರಿಗೆ ಭಯವಾಗಿ ಆ ಡೊಳ್ಳಿಗೆ ಕೈ ಮುಗಿದು ನಮಸ್ಕರಿಸಿ ತಮ್ಮದು ಸರ್ವತಾ ತಪ್ಪವಾಯಿತು ಎಂದು ವಾಪಾಸು ಹೋದರು.

## ೭.೩ ಐತಿಹ್ಯ

ಐತಿಹ್ಯ ಎಂಬುದು ಇಂಗ್ಲೀಷ್‌ನಲ್ಲಿ 'Legend' ಎಂಬ ಪದಕ್ಕೆ ಸಂವಾದಿಯಾಗಿ ನಾವು 'ಐತಿಹ್ಯ' ಎಂಬ ಪದವನ್ನು ಬಳಸುತ್ತಿದ್ದೇವೆ. ಐತಿಹ್ಯದ ಮೂಲವಾದ Legend ಎಂಬ ಪದ ಮಧ್ಯ ಕಾಲೀನ ಲ್ಯಾಟೀನ್ನಿನ 'ಲೆಜೆಂಡಾ' ಎಂಬ ರೂಪದಿಂದ ನಿಷ್ಪನ್ನವಾದುದು. ಇದರಲ್ಲಿ ಪರಿಸಬಹುದಾದ್ದು ಎಂದಾಗುತ್ತದೆ. ಐತಿಹ್ಯವೆಂದರೆ ಈಗ ವ್ಯಕ್ತಿ, ಸ್ಥಳ ಅಥವಾ ಘಟನೆಯೊಂದರ ಸುತ್ತ ಸಾಂಪ್ರದಾಯಿಕವಾಗಿ ಮತ್ತು ಯಾವುದೋ ಮೂಲ ಸಂಗತಿಗಳ ಮೇಲೆ ಆಧಾರಿತವಾಗಿ ಬೆಳೆದು ಬಂದ ಕಥನ ಎಂದು ಸಾಮಾನ್ಯ ಅರ್ಥ ಪಡೆದುಕೊಂಡಿದೆ.

ಐತಿಹ್ಯ ಹೆಚ್ಚಿನ ಸಂದರ್ಭಗಳಲ್ಲಿ ಒಂದು ಚಿಕ್ಕ ಕಥಾನಕವಾಗಿರುತ್ತದೆ. ನಂಬಿಕೆಗಳು, ಧಾರ್ಮಿಕ ಅಂಶಗಳು, ಆಚರಣೆಗಳು, ಮನೆಗಳು, ಸ್ಥಳೀಯ ನೈಸರ್ಗಿಕ ಚಿತ್ರಗಳು, ಚಾರಿತ್ರಿಕ ಘಟನೆಗಳು ಮುಂತಾದವು ಐತಿಹ್ಯ ಸೃಷ್ಟಿಗೆ ಮೂಲ ಪರಿಕರಗಳನ್ನು ಒದಗಿಸುತ್ತದೆ.[೩]

ಕಡಲಬಾಳು ಆಂಜನೇಯ ಸ್ವಾಮಿ ಪವಾಡಗಳ ಮೂಲಕ ತೋರಿಸಿದ ಕೆಲವು ಐತಿಹ್ಯಗಳಿಗೆ ಸಾಕ್ಷಿಗಳು ಈಗಲೂ ಜೀವಂತ ಸಾಕ್ಷಿಯಾಗಿ ಅಳಿಯದೆ ಉಳಿದಿವೆ.

೧. ಕಡಲಬಾಳು ಗ್ರಾಮದಲ್ಲಿ ಪ್ರತಿವರ್ಷ ಶ್ರಾವಣ ಸುದ್ದ ಸಪ್ತಮಿಯೆಂದು ಊರಿನಿಂದ ಸುಮಾರು ಹತ್ತು ಕಿಲೋ ಮೀಟರು ದೂರದಲ್ಲಿರುವ ತಿಮ್ಮಪ್ಪನ ಗುಡ್ಡದ ಜಾತ್ರೆಗೆ ಮಾರುತಿ ಉತ್ಸವ ಮೂರ್ತಿಯನ್ನು ಪಾಲಕಿಯಲ್ಲಿ ಕರೆದೊಯ್ದು ನಂತರ ಮರಳಿ ಸಾಯಾಂಕಾಲ ಏಳು ಗಂಟೆಗೆ ಬರುತ್ತಾರೆ. ಬರುವಾಗ ಸ್ವಾಮಿಗೆ ಊರಿನ ಜನತೆ ಸ್ವಾಗತ ಕೋರಿ ಕಾಣಿಕೆ ಅರ್ಪಿಸುತ್ತಾರೆ. ಪಾಲಕಿ ದೇವಸ್ಥಾನಕ್ಕೆ ಬಂದಾಗ ಆಗ ಪವಾಡ ಮಾಡುತ್ತಿದ್ದ ಕಡ್ಲೆಪ್ಪನನ್ನು ಮಳೆ-ಬೆಳೆ ವಿಚಾರವಾಗಿ ದೈವಸ್ಥರು ಕೇಳುತ್ತಿದ್ದರು. ಆತ ಆಂಜನೇಯನ ಕತ್ತರಿಬಾಣ ಹಿಡಿದುಕೊಂಡು ಆದಿನ ಪಾಲಕಿಯ ಜೊತೆಯಲ್ಲಿ ಇರಬೇಕಿತ್ತು ಆದರೆ ಆತ ಅಂದು ತನ್ನ ಹೆಂಡತಿಯ ಊರಾದ ಹೆಗ್ನಾಳ್ ಗ್ರಾಮದಲ್ಲಿದ್ದ. ಆಂಜನೇಯನ ಪಾಲಕಿಯು ದೇವಸ್ಥಾನವನ್ನು ಪ್ರವೇಶಿಸಲಿಲ್ಲ. ನಂತರ ಊರಿನ ದೈವಸ್ಥರು ಕಡ್ಲೆಪ್ಪನನ್ನು ಕರೆತರಲು ಹೆಗ್ನಾಳ್ ಗ್ರಾಮಕ್ಕೆ ಹೋದರು. ದೈವಸ್ಥರು ಇನ್ನೂ ಊರನ್ನು ಮುಟ್ಟಿರಲಿಲ್ಲ. ಆತನ ಮೈಮೇಲೆ ಮಾರುತಿ ಆವೇಶವಾಗಿ ಬಂದು ಮನೆಯ ಮುಂದಿನ ಊರಮ್ಮನ ಗುಡಿ ಹತ್ತಿರದ ಕಲ್ಲು ಹರೆಯ ಮೇಲೆ ಹಾರಿದನು. ಆಗ ಆ ಕಲ್ಲಿನ ಹರೆ ಹೊಡೆದು ಎರಡು ತುಂಡಾಯಿತು. ನಂತರ ಆತ ಓಡೋಡಿ ಕಡಲಬಾಳಿನ ಆಂಜನೇಯನ ದೇವಸ್ಥಾನಕ್ಕೆ ಬಂದು ದೈವಸ್ಥರಿಗೆ ಆ ವರ್ಷದ ಮಳೆ-ಬೆಳೆ ವಿಚಾರವಾಗಿ ಹೇಳಿದನು. ಇಡೀ ಊರಿನ ಜನತೆಯೇ ಅಲ್ಲಿ ಸೇರಿತ್ತು. ಹೊಡೆದ ಕಲ್ಲಿನ ಹರೆಯು ಹೆಗ್ನಾಳ್ ಗ್ರಾಮದಲ್ಲಿ ಊರಮ್ಮನ ದೇವಸ್ಥಾನದ ಮುಂದೆ ಈಗಲೂ ಜೀವಂತ ಸಾಕ್ಷಿಯಾಗಿದೆ. ಈಗಲೂ ಆ ಊರಿನ ಜನತೆ 'ಈ ಹರೆಯನ್ನು ಕಡಲಬಾಳಿನ ಹನುಮಪ್ಪ ಹೊಡೆದಿದ್ದಾನೆ' ಎಂದು ತಿಳಿಸುತ್ತಾರೆ.

೨. ದಾಸಯ್ಯನು ಆಂಜನೇಯನ ಪರಮಭಕ್ತನಾಗಿದ್ದನು. ಈತನು ಹೆಚ್ಚಿನ ಸಮಯವನ್ನು ಆಂಜನೇಯನ ದೇವಸ್ಥಾನದಲ್ಲಿಯೇ ಕಳೆಯುತ್ತಿದ್ದನು. ಆಗ ಬ್ರಿಟೀಷರ ಆಳ್ವಿಕೆ ಇತ್ತು. ಆಗ ದೇವಸ್ಥಾನದ ಆವರಣದಲ್ಲಿ ಬಹಳ ಹಳೆಯ ಕಾಲದ ಹುಣುಸೆ ಮರಗಳಿದ್ದವು. ಅವುಗಳನ್ನು ಕಡಿಸಲು ಬ್ರಿಟೀಷ್ ಅಧಿಕಾರಿಗಳು ಊರಿಗೆ ಬಂದರು. ಜನರು ಇದಕ್ಕೆ ತಕರಾರು ಮಾಡಲಿಲ್ಲ. ಆದರೆ ದೇವಸ್ಥಾನದಲ್ಲಿದ್ದ ದಾಸಯ್ಯನು ಮರಗಳನ್ನು ಕಡಿಯದಂತೆ ಅಡ್ಡಿಪಡಿಸಿದನು. 'ಬೇಕಾದರೆ ನನ್ನನ್ನು ಕಡಿದು ಮರಗಳನ್ನು ಕಡಿಯಿರಿ' ಎಂದು ಮರದ ಹತ್ತಿರ ಹೋಗಿ ಕುಳಿತುಕೊಂಡನು.

ಆದರೂ ಆ ಅಧಿಕಾರಿಗಳು ದಾಸಯ್ಯನ ಮಾತಿಗೆ ಒಪ್ಪಲಿಲ್ಲ. ಆಗ ದಾಸಯ್ಯನು ನಾಳೆಯ ದಿವಸ ನಾನು ಒಂದು ಪವಾಡ ಮಾಡುತ್ತೇನೆ. ಆ ಪವಾಡ ನಡೆದರೆ ನೀವು ಮರಗಳನ್ನು ಕಡಿಯಬಾರದು ಎಂದು ಕಾರರು ಹಾಕಿ ಮರುದಿನ ದೇವಸ್ಥಾನದಲ್ಲಿದ್ದ ಕತ್ತಿಯನ್ನು ತೆಗೆದುಕೊಂಡು ತನ್ನ ನಾಲಗೆಯನ್ನು ಕತ್ತರಿಸಿಕೊಂಡು ನಾಲಗೆ ಪವಾಡ ಮಾಡಿ ತೋರಿಸಿದನು. ಆದರೂ ಆ ಅಧಿಕಾರಿಗಳು ಈತನನ್ನು ಬಿಡದೆ ಬಳ್ಳಾರಿಗೆ ಕರೆದುಕೊಂಡು ಹೋಗಿ ಮೇಲಾಧಿಕಾರಿಗಳಿಗೆ ವಿಷಯ ತಿಳಿಸಿದರು. ಆ ಅಧಿಕಾರಿ ಇವರ ಮಾತನ್ನು ನಂಬದೆ ದಾಸಯ್ಯನನ್ನು ಜೈಲಿಗೆ ತಳ್ಳಿದನು. ಆಗ ದಾಸಯ್ಯನು ಜೈಲಿನಲ್ಲಿ ತನ್ನ ಆರಾಧ್ಯ ದೈವವಾದ ಕಡಲಬಾಳು ಆಂಜನೇಯನನ್ನು ಕುರಿತು "ಬಿಡಬ್ಯಾಡ ಎನಕೈಯ ಕಡಲಪುರ ಹನುಮಂತರಾಯ" ಎಂದು ಆಂಜನೇಯನನ್ನು ಕುರಿತು ಹಾಡಿದನು. ಆಗ ಜೈಲಿನ ಕೋಣೆಯ ಬೀಗಗಳು ತಾವಾಗಿಯೇ ಬಿಚ್ಚಿಕೊಂಡವು.

ನಂತರ ದಾಸಯ್ಯನನ್ನು ನ್ಯಾಯಾಲಯಕ್ಕೆ ಹಾಜರು ಪಡಿಸಿದರು. ನ್ಯಾಯಾಲಯದಲ್ಲಿ ದಾಸಯ್ಯನನ್ನು ಕುರಿತು ವಿಚಾರಣೆ ಮಾಡುವಾಗ ಆತನ ಕೈಗೆ ಹಾಕಿದ್ದ ಬೇಡಿಗಳು ಸಹ ತಾವಾಗಿಯೇ ಬಿಚ್ಚಿಕೊಂಡವು. ಇದನ್ನು ನೋಡಿ ನ್ಯಾಯದೀಶರಿಗೆ ಆಶ್ಚರ್ಯವಾಯಿತು. ನಂತರ ಆತನನ್ನು ಬಿಡುಗಡೆಗೊಳಿಸಿ ಊರಿಗೆ ಕಳುಹಿಸುವ ವ್ಯವಸ್ಥೆ ಮಾಡಿದರು. ಕಡಲಬಾಳು ಆಂಜನೇಯ ಸ್ವಾಮಿಯ ಮಹಿಮೆ ಅಧಿಕಾರಿಗೆ ತಿಳಿಯಿತು. ಅದಕ್ಕಾಗಿ ನ್ಯಾಯಾಲಯದ ಆವರಣದಲ್ಲಿ ಕಡಲಬಾಳು ಆಂಜನೇಯನ ಗುಡಿಯನ್ನು ಕಟ್ಟಿಸಿದರು. ಈಗಲೂ ಬಳ್ಳಾರಿಯ ನ್ಯಾಯಾಲಯ ಆವರಣದಲ್ಲಿ ಕಡಲಬಾಳು ಆಂಜನೇಯ ಸ್ವಾಮಿಯ ಗುಡಿಯನ್ನು ಕಾಣಬಹುದು.

## ೭.೪ ಕಾವ್ಯ

ಅಶಿಕ್ಷಿತರ ಜನ ಸಮೂಹದ ನಡುವೆ ವಾಕ್ ಸಂಪ್ರದಾಯದ ಮೂಲಕ ಹರಿದು ಬಂದಿರುವ ಒಂದು ಗುಂಪಿನ ಕಾವ್ಯ ಮತ್ತು ಸಂಗೀತಗಳ ಸಮಾವೇಶದಿಂದಾದದ್ದು ಈ ಜನಪದಗೀತೆ. ಈ ಗುಂಪಿನ ನೆಲೆ ಪ್ರಾಧಾನವಾಗಿ ಗ್ರಾಮೀಣ ಸಮುದಾಯದ್ದು. ಇದು ಪ್ರಾಚೀನ ಸಂಸ್ಕೃತಿಯನ್ನು ಉಳಿಸಿಕೊಂಡು ಬಂದಿದೆ. ಕಾರಣ ಜನಪದ ಗೀತೆಯಲ್ಲಿ ಗ್ರಾಮೀಣ ಜನರ ಸುಖ ದುಃಖಗಳನ್ನು, ಸಮಸ್ಯೆಗಳನ್ನು ಕಾಣಬಹುದು.

ಜನಪದಗೀತೆ ಯಾವುದನ್ನೇ ವಿವರಿಸಲಿ ಅದನ್ನು ನೇರವಾಗಿ ಹೇಳುತ್ತದೆ. ಅದನ್ನು ಪ್ರಯತ್ನ ಪೂರ್ವಕವಾಗಿ ಕಲಾತ್ಮಕಗೊಳಿಸುವುದಾಗಲಿ ಅಥವಾ ಕಾವ್ಯದ ಪರಿಣಾಮಗಳನ್ನು ತರಬೇಕೆಂಬುದಾಗಲಿ ಇರುವುದಿಲ್ಲ. ಆದ್ದರಿಂದ ಜನಪದಗೀತೆಯ ಶುದ್ಧ ಸಾಹಿತ್ತಿಕ ಪರಿಶೀಲನೆ ಲಾಭದಾಯಕವಾಗಿರುವುದಿಲ್ಲ. ಇಲ್ಲಿ ಸಾಹಿತ್ಯ ಮೌಲ್ಯಕ್ಕಿಂತ ಹೆಚ್ಚಾಗಿ ಸಾಮಾಜಿಕ, ಚಾರಿತ್ರಿಕ ಹಾಗೂ ಮನಶಾಸ್ತ್ರೀಯ ಮೌಲ್ಯಗಳೇ ನಮ್ಮ ಗಮನವನ್ನು ಸೆಳೆಯುತ್ತವೆ. ಇದರಿಂದ ಜನಪದರ ಮನೋಭಾವಗಳನ್ನು ನಿರ್ಧರಿಸಲು ಸಾಧ್ಯವಾಗುತ್ತದೆ.

ಜನಪದಗೀತೆ ಗುಂಪಿನ ಸಾಮಾನ್ಯ ಸದಸ್ಯರೂ ಭಾಗವಹಿಸಬಹುದಾದ ಒಂದು ಕಲೆ. ಜನಪದ ಸಮೂಹದ ಪ್ರತಿಯೊಬ್ಬರೂ ಗೀತೆಗಳನ್ನು ಬಲ್ಲವರಾಗಿರುತ್ತಾರೆ. ಜನಪದ ಗೀತೆಯ ರೂಪ ತೀರ ಸರಳವಾದುದು. ಸಾಮಾನ್ಯವಾಗಿ ಅದು ಚಿಕ್ಕ ರೂಪಗಳಲ್ಲಿ ಬಳಕೆಯಾಗುತ್ತದೆ.

ಮನುಷ್ಯ ಎಂದಿನಿಂದ ಆಚರಣೆಗಳನ್ನು ಮಾಡುತ್ತ ಬಂದನೋ ಅವುಗಳಿಗೆ ಸಂವಾದಿಯಾಗಿ ಜನಪದ ಹಾಡುಗಳನ್ನು ಸೃಷ್ಟಿಸಿಕೊಂಡಿದ್ದಾನೆ. ಸಾಮಾನ್ಯಜೀವಿಯಾದ ಹಳ್ಳಿಗನಿಗೆ, ಸಂಸ್ಕೃತಮಯವಾದ ಅಥವಾ ಶಿಷ್ಟಭಾಷೆಯ ಗ್ರಂಥಗಳನ್ನು ಅರ್ಥಮಾಡಿಕೊಳ್ಳಲಾರದ ನಿರಕ್ಷರ ಕುಕ್ಷಿಯಾದ ಅವನಿಗೆ ಜನಪದ ಹಾಡುಗಳೇ ವೇದಗಳಾದವು. ಮಂತ್ರಗಳಾದವು. ಈ ಕಾರಣದಿಂದ ಅವನು ತನ್ನದೇ ಆದ ಒಂದು ಬಾಯಿ ಗ್ರಂಥವನ್ನು ತಯಾರಿಸಿಕೊಂಡ. ಅದನ್ನು ಆಗಾಗ ಹಾಡಿ ಆನಂದ ಪಟ್ಟ. ಅವುಗಳನ್ನೇ ಎಲ್ಲಾ ಸಂಪ್ರದಾಯಗಳಿಗೂ ಅಳವಡಿಸಿಕೊಂಡ.[೪]

ಕಡಲಬಾಳು ಆಂಜನೇಯನ ಮೇಲೆ ಊರಿನ ಹರಿಜನ ಮಹಿಳೆಯರು ಹಾಡುತ್ತಾರೆ. ಅವರು ಹೊಲದಲ್ಲಿ ಕೆಲಸ ಮಾಡುವ ಸಂದರ್ಭದಲ್ಲಿ, ಮದುವೆ ಸಂದರ್ಭದಲ್ಲಿ, ಧಾರ್ಮಿಕ ಆಚರಣೆಗಳ ಸಂದರ್ಭದಲ್ಲಿ ಗುಂಪಾಗಿ ಆಂಜನೇಯನ ಮೇಲೆ ಕಾವ್ಯ ಹೇಳುತ್ತಾರೆ. ಇಬ್ಬರೂ ಮುಮ್ಮೇಳದಲ್ಲಿ ಉಳಿದವರು ಹಿಮ್ಮೇಳದಲ್ಲಿ ಹಾಡುತ್ತಾರೆ. ಆ ಕಾವ್ಯಗಳು ಅವರ ನಾಲಗೆಯ ಮೇಲೆ ಈಗಲೂ ಜೀವಂತವಾಗಿವೆ.



ಅಡಿ ಟಿಪ್ಪಣಿಗಳು

೧. ಸುಜಾತ ಅಕ್ಕಿ. ತಂಬ್ರಹಳ್ಳಿಯ ಬಂಡೆರಂಗನಾಥೇಶ್ವರ ಜಾತ್ರೆ-ಜಾನಪದೀಯ ಅಧ್ಯಯನ, ಪುಟ. ೮೫

೨. ಅದೇ ಪುಟ. ೭೦

೩. ಅದೇ ಪುಟ. ೭೧-೭೨

೪. ಹಿ.ಚಿ. ಬೋರಲಿಂಗಯ್ಯ. ಉಜ್ಜನಿ ಚೌಡಮ್ಮ, ಪುಟ. ೮೯

# ಶ್ರೀ ಕಡಲಬಾಳಪ್ಪನ ಸ್ತುತಿ

ನಿನ್ನಕಂಡು ಧನ್ಯವಾಯಿತು ಈಜನುಮ ||
ಸನ್ನುತಾಂಗನೆ ಶ್ರೀಶರಧಿಪುರದ್ಹನುಮಾ ||ಪ||

ಅಂಜನಾ ದೇವಿಯ ಮಮತೆಯ ಕುವರ
ಸಂಜೀವನ ಪರ್ವತವ ತಂದ ಧೀರ ||
ಅಂಜದೇ ಅಳುಕದೆ ಶರಧಿಯನು ದಾಟಿ
ಮಂಜುಳೆ ಸೀತೆಗುಂಗರವ ಕೊಟ್ಟಶೂರ ||೧||

ಕುಂತಿಯಾ ಉದುರದಲಿ ಮತ್ತೆ ನೀಪುಟ್ಟಿ
ಕಾಂತೆ ಭಾರತಿಯ ಕರಗಳನು ಪಿಡಿದಿ ||
ಹಂತಕಾ ಕೀಚಕನ ನಿಂತಲ್ಲೆಕೊಂದು
ಸಂತಸದಿ ಕೇಕೆ ಹಾಕಿದ ಬಲಾಢ್ಯಭೀಮ ||೨||

ಗುರು ಮಧ್ವಮುನಿಯಾಗಿ ಧರೆಯೊಳಗೆ ಅವತರಿಸಿ
ಪರಿಪರಿ ಪ್ರೀತಿಯಲಿ ಪರಮಾತ್ಮನನು ಭಜಿಸಿ ||
ದುರುಳ ದುರ್ವಾದಿಗಳನ್ನೆಲ್ಲ ಸರಸದಲಿ ಜಯಿಸಿ
ವರ ವೈಷ್ಣವಾ ಪಂಥವನು ಹರುಷದಲಿ ಸ್ಥಾಪಿಸಿದಿ ||೩||

ಅನುದಿನವು ಬಿಡದೆ ಶ್ರೀರಾಮಾನಾಮವನು
ಘನ ಭಕುತಿಯಿಂದ ಜಪಿಸುವಂಥವಾನರ ||
ದಿನಕರನೊಡನೆ ಕದನವಾಡಿದ ವೀರ
ಕೊನೆತನಕ ಕಾಪಾಡು ಕಡಲಪುರದ್ಹನುಮ ||೪||

ಪೊಡವಿಯೊಳಗೆಲ್ಲ ಮೆರೆವ ನಮ್ಮ ಕಡಲಬಾಳಪ್ಪ
ಗುಡಿಯ ನೋಡುವುದೇ ನನ್ನ ಕಂಗಳಿಗೆ ದೊಡ್ಡ ಹಬ್ಬ ||
ಎಡೆಬಿಡದೆ ಭಜಿಸಲಿ ತವನಾಮ ಶರಧಿಪುರದ್ಹನುಮಾ
ಗಡಿಬಿಡಿಯಲಿ ಬರೆದ ಅಕ್ಷರವ ಮನ್ನಿಸು ವರಮಾರುತೀಶ ||೫||

# ಶ್ರೀಕಡಲಬಾಳಪ್ಪನ ಉದಯರಾಗ

ಏಳು ಹನುಮಂತ ನಿನಗೆಷ್ಟು ನಿದ್ರಿ
ಏಳು ಗುಣವಂತ ಬಲಭೀಮ ಸಮೀರ ಸಾಮಂತ ||ಪ||

ಬಾಲ ಭಾಸ್ಕರ ತಾನು ಬಾಗಿಲಿಗೆ ಬಂದು
ಧೂಳಿ ದರುಶನಕೆಂದು ಕಾದುನಿಂತಿಹನು ||
ತಾಳ ಗೆಜ್ಜೆಯನಾದ ಹರೀದಾಸ ಭಜನಾಮೇಳ
ದಾಲಾಪನೆ ತುಂಬಿಹುದು ನಿನ್ನಾಲಯಾದಲ್ಲಿ ||೧||

ಸುತ್ತಮುತ್ತಿರುವಂಥ ಹತ್ತುಹಳ್ಳಿಗಳಲ್ಲಿ
ತತ್ವಜ್ಞಾನವ ನೀನು ಬಿತ್ತರಿಸಬೇಕು ||
ಅರ್ಥವತ್ತಾದಂಥ ದ್ವೈತ ಸಿದ್ಧಾಂತದ
ಸತ್ವಸಾರುವ ಸಾರಾಂಶ ಪೃಥ್ವಿಗರುಹು ಬಾರಯ್ಯಾ ||೨||

ಧರ್ಮಜ್ಞಾನಿಯು ನೀನು ಕರ್ಮಯೋಗಿಯುನೀನು
ದರ್ಮ ಕರ್ಮದ ಮರ್ಮ ಅರಿತ ಸುರಸಾರ್ವಭೌಮ ||
ಧರ್ಮ ಗ್ಲಾನಿಯನಳಿಸಿ ಸ್ವಧರ್ಮ ಮಾನವನುಳಿಸಿ
ಧರ್ಮ ಧ್ವಜ ಏರಿಸಿ ಧರ್ಮದುಂದುಭಿಯ ಮೊಳಗಿಸಯ್ಯಾ ||೩||

ಅಧ್ಯಾತ್ಮಮಾರ್ಗದ ಅದ್ವೈರ್ಯ ಸುರಧೇನು
ಮಧ್ವಮತದಭಿವೃದ್ಧಿ ದುಗ್ಧಾಬ್ಧಿ ಹೆಜ್ಜೇನು ||
ಸದ್‌ಭಾವ ಭಕುತಿಯ ದಿಗ್‌ದರ್ಶಿ ಋಗ್‌ಭಾನು
ಸದ್‌ವೈಷ್ಣವಾ ವಾಗ್‌ಝುರಿಯ ಧರೆಗಿಳಿಸು ಬಾರಯ್ಯಾ ||೪||

ಸಾಧನೆಯ ಹಾದಿಯ ಸದ್ಬೋಧ ಸಂಶೋಧಕ
ಮೇದಿನಿಯ ಮಂದಾರ ಮಾಧವನ ಆರಾಧಕ ||
ವೇದವ್ಯಾಸರ ಭಜಿಸಿ ವಾದಿಗಳ ಜಯಿಸಿ
ವೇದನಿಧಿ ಎಂದೆನಿಸಿದ ವೇದಾಂತ ಸಾಮ್ರಾಜ್ಯದಧಿಪತಿಯೇ ||೫||

ದ್ವೇಷ ಅಸೂಯೆಗಳಿಲ್ಲ ಆಶೆ ಆಮಿಷವಿಲ್ಲ
ಕಾಸು ಕಾಂಚಾಣದಾಶೆ ಮೊದಲೆ ನಿನಗಿಲ್ಲ ||
ವಾಸುದೇವನ ಸ್ಮರಣೆ ಸಾತ್ವೀಕದಾಚರಣೆ
ದಾಸ್ಯಭಾವದ ಸೌಭಾಗ್ಯ ಸೌಗಂಧ ಸೌರಭದ ಸೂಸು ಬಾರಯ್ಯ ||೬||

ರಾಮಚಂದ್ರನ ಭಕುತ ನಿಷ್ಕಾಮ ಮಣಿ ಮುಕುಟ
ಸಾಮರಸ ರಸದೂಟ ಸಾಮ ಗಾಯನ ಪ್ರೀತ ||
ಸೌಮ್ಯಭಾವದಿ ನಿನ್ನ ನಾಮ ಮಹಿಮೆಯ ತೋರಿ
ತಾಮಸವ ಮೆಟ್ಟಲು ನಿನ್ನ ಧಾಮದ ಮೆಟ್ಟಲಿಳಿದು ಬಾರಯ್ಯಾ ||೭||

ಬಾಳಿ ಬದುಕಿದಿ ಮೊದಲು ಕಡಲಿನಾಳದಲಿ
ತೇಲಿ ಬಂದಿ ಮುಂದೆ ವೇದವತಿ ಹೊಳೆಯಲ್ಲಿ ||
ಕಾಲಕಾಲಕೆ ನಿನ್ನ ಲೀಲೆಗಳ ತೋರುತ್ತ ವೇದಾಂತ
ದೂಳಿಗವ ನಡೆಸುಬಾನಮ್ಮ ಕಡಲಬಾಳಲ್ಲಿ ||೭||

# ಶ್ರೀಕಡಲಬಾಳಪ್ಪನ ವೈಭವ

ಕಂಡೆ ನಿನ್ನ ವೈಭವವ ಕಡಲಬಾಳ ದೈವ ಹನುಮ ||ಪ||

ಕಂಡೆ ನಿನ್ನ ಚಲುವಿಕೆಯ ಅಖಂಡ ಅಧ್ಯಾತ್ಮದೈಸಿರಿಯ
ಚಂದ್ರ ಸೂರ್ಯ ಪ್ರಖರತೆಯ ಅಚಂದ್ರಾರ್ಕ ಕೀರ್ತಿ ಪ್ರಭೆಯ ||೧||

ಕಂಡೆ ನಿನ್ನ ಮಹಿಮೆಯ ಪ್ರಚಂಡ ವಿದ್ವತ್ ಸುಧೆಯ
ಉಂಡೆ ಭಕುತಿ ಸವಿಯ ಕೊಂಡಾಡಿದೆ ಕೃಪಾಸರಿತ್ ಝರಿಯ ||೨||

ಕಂಡೆ ನಿನ್ನ ರಥಾರೋಹಣ ಸೀತಾರಾಮ ಸಮೇತ ಪಯಣ
ಅಪೂರ್ವ ದೃಶ್ಯ ಅವಿಸ್ಮರಣ ಅಪಮೃತ್ಯುಕಳೆವ ದಿವ್ಯ ದರ್ಶನ ||೩||

ಕಂಡೆ ನಿನ್ನ ಅಧ್ಬುತವ ಅಗ್ನಿಕುಂಡದಲ್ಲಿ ಮೆರೆವ
ಹಿಂಡು, ಹಿಂಡು ಭಕ್ತದಂಡು ಕೆಂಡದುಂಡೆ ತುಳಿವ ಪವಾಡವ ||೪||

ಕಂಡೆ ನಿನ್ನ ಓಟಹಾರಾಟ ಬ್ಯಾಟ ಮರದ ದಿವ್ಯನೋಟ
ಕಾಟಕಳೆವುದೆಲ್ಲ ದುಷ್ಟಕೂಟ, ಭಜಕ ಜನರ ರಸದೂಟ ||೫||

ಕಂಡೆ ನಿನ್ನ ತೀಕ್ಷ್ಣನಯನ ಮುಳ್ಳುಪಾಲಕ್ಕಿ ಶಯನ
ಅಳ್ಳೆದೆಯ ಮನುಜ ಪಲಾಯನ ಸುಳ್ಳಲ್ಲ ಇದು ನಿಜ ನಿನ್ನ ಮಹಿಮ ||೬||

ಕಂಡೆ ನಿನ್ನ ಪರಶಿ ಪರಿವಾರಪೂರ್ಣ || ಬೆಡಗು ದಿಡಗಿನ ಗುಡಿ
ಪ್ರಾಂಗಣ || ಕಂಡು ಕೈಮುಗಿವೆ ಮುಖ್ಯ ಪ್ರಾಣ ಉದ್ದಂಡ ಹಾಕುವೆ ಉದ್ಧಾರ ಮಾಡೊ ಜಾಣ
||೭||

ಕಂಡೆ ನಿನ್ನ ಅವಭೃತ ಶುಭ್ರಸ್ನಾನ ಅಂಗನೆ ವೇದವತಿಯಲ್ಲಿ ಮಂಗಳ ಮಜ್ಜನ
ಇಂಗಿಹೋಗ್ವುದೆಲ್ಲರ ಭವಬಂಧನ ಅಂಗ ಸಂಗ ಸುಖ ಸೌಖ್ಯ ಸಂಜೀವನ ||೮||

ಕಂಡೆ ನಿನ್ನ ಜಾತ್ರೆ ಡೊಳ್ಳಿನಾರ್ಭಟ ಶರಧಿಪುರದ ಸಂತ ಸಾಮ್ರಾಟ
ಉಂಡೆ ಮೃಷ್ಟಾನ್ನ ಭಕ್ಷದೂಟ ಕಂಡೆ ಕಣ್ಣತುಂಬ ನಿನ್ನಾಟ ಪಾಟ ||೯||

# ಶ್ರೀಕಡಲಬಾಳಪ್ಪನ ನಂಬಿದ ಪಾದ

ನಂಬಿ ಬಂದೆ ನಿನ್ನ ಪಾದದ ಅಂಬುಧೀಯಪುರದ ಜೀವ ಸಂಜೀವ ರಾಯನೆ ||ಪ||

ನಂಬಿಬಂದೆ ನಿನ್ನ ಪಾದ ಇಂಬುಗೊಟ್ಟು ಸಲಹೊ ದೇವ
ಬೆಂಬಿಡದೆ ಕಾಯುವಂಥ ಅಂಜನೀಯ ಕುವರನೇ ||೧||

ಅಂಬರಾದೆತ್ತರ ದ್ವೈತ ದುಂದುಭೀಯ ಮೊಳಗಿಸಿ
ಅಂಬಿಗನು ನೀನಾಗಿ ಭವಾಬ್ಧಿದಾಟಿಸುವಂಥ ಬಲಾಢ್ಯ ಭಕ್ತ ಭೀಮನೆ ||೨||

ಕಂಬುಕಹಳೆ ಡೋಲು ಭಜಂತ್ರಿ ತಂಬೂರಿ ತಾಳ ತಬಲ
ಸಂಭ್ರಮದ ವಾದ್ಯನಾದದಾನಂದ ಸದನದಾ ಆನಂದತೀರ್ಥನೆ ||೩||

ಡಂಬಚಾರವೆಲ್ಲ ಬಿಡಿಸಿ ಭಕ್ತದುಂಬಿಯಾಗಿ ಸ್ವೀಕರಿಸಿ
ತುಂಬು ಹೃದಯ ಪ್ರೇಮಕುಂಜ ಮಂದಾರ ಮಧುವ ಚೀಪಿಸು ||೪||

ಬಿಂಬರೂಪಿ ಶರಧಿಪುರದ ಪ್ರತಿಬಿಂಬ ರೂಪ ಸ್ವಾಮಿಯೇ
ನಂಬಿಬಂದ ಆಸಕ್ತ ಜನರ ಆಪತ್ ಬಂಧು ಆಪ್ತ ತಾತನೆ ||೫||

ರಚನೆ ಮತ್ತು ಹಾಡಿದವರು
ಶ್ರೀಮತಿ ಜಲಜಾಗಂಗೂರ್, ಹೊಸಪೇಟೆ

## ಅಪ್ಪಾನ ನೆನಿಮನವೆ

ಅಣ್ಣನಾ ನೆನಿ ಮನವೇ
ಅಣ್ಣಯ್ಯನ ನೆನಿ ಮನವೇ
ಸಣ್ಣ ಕೊರಳರನ ನೆನಿಮನವೇ
ಭೂಮಿಗೆ ಕಣ್ಣ ಕೊಟ್ಟಯ್ಯ ನೆನಿಮನವೇ ||

ಅಪ್ಪಾನ ನೆನಿ ಮನವೇ
ಅಪ್ಪಯ್ಯನ ನೆನಿ ಮನವೇ
ಕಪ್ಪಾಗೊರಳರನ ನೆನಿ ಮನವೇ
ಭೂಮಿಗೆ ಹೆಪ್ಪಕೊಟ್ಟಯ್ಯ ನೆನಿ ಮನವೇ ||

ಅಪ್ಪನಾ ಕಾಣಕ ಹಚ್ಚ ಮಲ್ಲಿಗೆಬೇಕು
ಮುತ್ತಾಲಿ ತುಂಬಾ ಹಣಬೆಕು.
ಹನುಮನ ಕಾಣಕ ಮನಬೇಕು ||

ಅಣ್ಣಾನಾ ಕಾಣಕ ಸಣ್ಣಾ ಮಲ್ಲಿಗೆಬೇಕು
ಗಿಣ್ಣಾಲಿ ತುಂಬಾ ಹಣಬೇಕು
ಹನುಮನ ಕಾಣಕ ಮನಬೇಕು ||

## ಅಪ್ಪಾ ಏರ್‍ಯಾನೆ ಹೊಸತೇರಾ

ಒಂದೊಂದು ತರವೆ ಹನುಮನಿನ್ನ
ವನವೊಂದೇ ಸಿರಿಯೇ
ಅಪ್ಪಾನ ತೇರಿಗೆ ಇಪ್ಪತ್ತು ಮಿಣಿಯಚ್ಚಿ
ಪಟ್ಟಗೋಪುರವ ಪಟ ಏರಿ
ಪಟ್ಟೇದ ವಸ್ತ್ರವ ಪಟವೆರೇನ ಹನ್ನಣ್ಣನ
ಅಪ್ಪಾ ಏರ್‍ಯಾನೆ ಹೊಸತೇರಾ
ಅಣ್ಣಾನ ತೇರಿಗೆ ಹನ್ನೊದು ಮಿಣಿಯಚ್ಚಿ
ಬಣ್ಣದ ವಸ್ತ್ರವ ಪಟವೇರಿ
ಅಣ್ಣ ಏರ್‍ಯಾನೆ ಹೊಸತೇರಾ

## ಧೀರಾ ಕುಂತಾನೆ ಹನುಮ

ನನ್ನಯ್ಯನಾ ತೇರಾ ಸಿಂಗಾರ ನೋಡೇ
ನಮ್ಮಾ ಶಿವ ಬೆಳದಿಂಗಳಾಗಿ ಬಂದಾ
ತೇರಿನ ಮೇಲೆ ದೇವರು ಕುಂತಾನೆ
ಮಾರಿಯ ಮೇಲೆ ಹರಿನಾಮ
ಧೀರಾ ಕುಂತಾನೆ ಹನುಮ
ಕಟ್ಟೆಯ ಮೇಲೆ ದಿಟ್ಟ ಕುಂತಾನೆ
ಹೊಟ್ಟೆಯ ಮೇಲೆ ಹರಿನಾಮ
ಇಟಗೊಂಡು ದಿಟ್ಟಕುಂತಾನೆ ಹನುಮ

## ಮುತ್ತಿನ ಆರತಿ ಹಿಡಿದಿದ್ದೆ

ಪಲ್ಲಕ್ಕಿ ಬರುವಾಗ ಅಲ್ಲಿನಾನೇ ನಿಂತಿದ್ದೆ
ಮುತ್ತಿನ ಆರತಿ ಹಿಡದಿದ್ದೆ | ಹನುಮನ
ಪಲ್ಲಕ್ಕಿ ಗುಡಿಗೆ ಹೋಗುವಾಗ
ಛತ್ರಿಕಿ ಬರುವಾಗ ಅಲ್ಲಿ ನಾನೇನಿಂತಿದ್ದೆ
ಮುತ್ತಿನ ಆರತಿ ಹಿಡಿದಿದ್ದೆ | ಹನುಮನ
ಛತ್ರಿಕಿ ಗುಡಿಗೆ ಹೋಗುವಾಗ
ಉಚ್ಚಯ್ಯಾ ಬರುವಾಗ ಅಲ್ಲಿ ನಾನೇ ನಿಂತಿದ್ದೆ
ಮುತ್ತಿನ ಆರತಿ ಹಿಡಿದಿದ್ದೆ | ಹನುಮನ
ಗುಡಿಗೆ ಹೋಗುವಾಗ

# ಅಪ್ಪಾ ನಿನ್ನಾ ಕಾಲು ತುಪ್ಪಾಕ್ಕಿನ್ನ ಮಿದವು

ಅಪ್ಪಾ ನಿನ್ನಾ ಕಾಲು ತುಪ್ಪಾಕ್ಕಿನ್ನ ಮಿದವು
ಮತ್ತಲ್ಲಿ ತುಳಿದೆ ಹೊಸ ಮುಳ್ಳ
ಕಡ್ಲಬಾಳ ಮುತ್ತಿನ ಚಾವಡಿ ಬಯಲಾಗ
ಅಣ್ಣಾ ನಿನ್ನ ಕಾಲು ಎಣ್ಣೀಗಿನ್ನ ಮಿದವು
ಇನ್ನೆಲ್ಲಿ ತುಳಿದೆ ಹೊಸ ಮುಳ್ಳ
ಅಡವಿಲಡವಿಗುಂಟ ಅಡವಿ ಮುಳ್ಳ ಬಾಳ
ಹೊಲೆಯ ಮಾದಿಗನ ಕರಿಸ್ಯಾನ
ಕೊಟ್ಯಾನ ಎಡಗಾಲ ಪಾದಾದಳತೀಯಾ
ಕಟ್ಟಿಕಟ್ಟಿಗುಂಟ ಒಟ್ಟಿ ಮುಳ್ಳ ಬಾಳ
ದಿಟ್ಟ ಮಾದಿಗನ ಕರಿಸ್ಯಾನ
ಕೊಟ್ಯಾನ ಬಲಗಾಲ ಪಾದದಳತೀಯಾ
ಕಂಚಿಹುಲ್ಲಾ ಮೇದ ಬೆಂಚಿನೀರಾ ಕುಡದ
ಮಿಂಚಿಟ್ಟುಬರುವ ಬಸವಣ್ಣನ
ಚರ್ಮವಾ ಹಂಚಿರಣ್ಣನಾ ಕೆಲಸಕೆ
ಅಡವಿಹುಲ್ಲಾ ಮೇದು ಮೊಡವಿ ನೀರಾ ಕುಡಿದು
ಒಡಗುರಿಸಿ ಬರುವ ಬಸವಣ್ಣನ
ಚರ್ಮವಾ ತೆಗೆದಿಡಿರಣ್ಣನಾ ಕೆಲಸಕೆ
ಅಪ್ಪಾ ನಿನ್ನ ಶಾಸಕ್ಕೆ ಮತ್ಯಾರು ಬರಬೇಕು
ಚಿಕ್ಕ ಪ್ರಾಯದಾ ಹುಡುಗಾರೆ
ಮಾಡಿದ ಶಾಸ ನೆತ್ತಿಮ್ಯಲೊತ್ತು ಮೆರೆದಾರೆ

# ಮಂಗಳಾರತಿ

ಜಯಮಂಗಳಂ ನಿತ್ಯ ಶುಭ ಮಂಗಳಂ
ರಾಮಬ್ಯಾಟಿಯಾಡಲು ಹೋಗುತ್ತೀರಲು
ಹೋಗೋಗಿಯಾವಾಗ ಬರುತ್ತೀರಲು
ಹೋದಾಗ ಸೀತೆಯನ್ನೊಯ್ಯುತ್ತಿರಲು
ಬಾಗಲ ಕಾಯಂತ ಗರುಡ ಪಕ್ಷಿ ಎಂಬ
ರಾಮನೆಂದು ಪ್ರಾಣ ಬಿಡುತ್ತೀರಲು ||ಜಯ||

ರಾಮನನ್ನ ಸುದ್ದಿ ಯಾರಿಗೆ ಮುಟ್ಯಾವೆ
ಏನೂ ಗದ್ದಲಾ ಮನಿಯೊಳಗೆ
ಯಾರು ಹೊಕ್ಕರೆ ನಮ್ಮ ಮಠದೊಳಗೆ
ಹಾಲಂತ ಮಡದಿಯ ಅನ್ನಿಗರೊಯ್ದಾರು
ಹೇಗೆ ಮಾಡಲಿ ತಮ್ಮ ಲಕ್ಷ್ಮಣನೇ ||ಜಯ||

ಚಿಂತೆ ಒಳಗೆ ಅವರು ಕುಂತಿದ್ದಾರೆ
ಬಾಲಹನುಮ ಬಂದು ನಿಂತಿದ್ದಾನೆ
ಚಿಂತೆಯ ತಕ್ಕುಂಡು ಕೇಳಿದಿದ್ದಾನೆ
ತಾಯಿ ಸೀತವ್ವನ ತರಲು ನಾನಿದ್ದಾಗ
ಬಾಲಹನುಮ ಎಂದು ಕರಿಯದಿರು ||ಜಯ||

ಬಾಲ ಹಾಡಿದ ಮಾತು ಬಾಳ ಆಶ್ಚರ್ಯ ಎಂದು
ಬಾಲ ಬಾಲಕನೆಂದು ಕರೆದಿದ್ದಾರೆ
ಮಾರಿ ಮೇಲೆ ಹಸ್ತವ ಇಟ್ಟಿದ್ದಾರೆ.
ಲಂಕಾದೇಶ ಎಂಬುದು ಎಂಬತ್ತು ಗಾವುದ
ಹೆಂಗಾ ಇಳಿದು ಬಂದೇ ಅಣ್ಣಯ್ಯನೇ ||ಜಯ||

ಸುತ್ತೇಳು ಸಮುದ್ರ ನಿಲುವುಗಟ್ಟಿದ್ದಾನೆ
ತಾಯ್ತೆಂದೆಯರನ್ನು ನಿಲ್ಲಿಸಿದ್ದಾನೆ
ಜೋಡು ಎರಡು ಕಾಯಿಗಳನ್ನು ಒಡೆಸಿದ್ದಾನೆ
ಜೋಡಿಸಿ ಕೈಯನ್ನು ಮುಗಿದಿದ್ದಾನೆ
ತಾಯ್ತೆಂದೆ ಕುಳ್ಳಿರಿಸಿ ಚಂದ್ರ ಸ್ಮರಣೆ ಮಾಡಿ
ಹೋಗಿ ಬಂದಾನೆ ನಮ್ಮ ಬಾಲಹನುಮನು ||ಜಯ||

ಹಾಡಿದವರು
ಗೋಣೆಪ್ಪನವರ ಪಕ್ಕೀರಮ್ಮ
ಎಲ್ಲಾರಿ ಮರಿಯಮ್ಮ ಮತ್ತು ಸಂಗಡಿಗರು
ಕಡಲಬಾಳು

# ಅಧ್ಯಾಯ ೮

## ಸಮಾರೋಪ

ಗ್ರಾಮ ದೈವಗಳ ಅಧ್ಯಯನದಿಂದ ಇವತ್ತಿನ ಸಂಕೀರ್ಣ, ಸಂಕ್ರಮಣ ಸಂಸ್ಕೃತಿಯ ಸ್ಥಿತಿಗತಿಗಳನ್ನು ಅರಿತುಕೊಳ್ಳಬಹುದಾಗಿದೆ. ಅದೇ ರೀತಿ ಗತಸಂಸ್ಕೃತಿಯ ಕುರುಹುಗಳನ್ನು ಕೆಲವುಮಟ್ಟಿಗೆ ತಿಳಿದು ಕೊಳ್ಳಬಹುದಾಗಿದೆ.

ದೈವಕ್ಕೆ ಸಂಬಂಧಿಸಿದಂತಹ ಆಚರಣೆಗಳು ಬಹಳ ಹಿಂದಿನ ಕಾಲದಿಂದಲೂ ನಡೆಯುತ್ತಾ ಬಂದಿವೆ. ಅದರಲ್ಲೂ ಹನುಮಂತ ದೇವರಿಗೆ ಸಂಬಂಧಿಸಿದಂತೆ ಅನೇಕ ಆಚರಣೆಗಳು ಇಂದಿಗೂ ನಡೆಯುತ್ತಿವೆ. ಉತ್ತರ ಕರ್ನಾಟಕದಲ್ಲಿ ಹನುಮಪ್ಪನಿಗೆ ವಿಶಿಷ್ಟವಾದ ಮಹತ್ವವಿದೆ. ಏಕೆಂದರೆ ಈ ಭಾಗವು ಕಿಷ್ಕಿಂದೆಯ ಪ್ರದೇಶವಾಗಿದೆ. ಆತ ಇಲ್ಲಿನ ಜನ ಪ್ರಿಯವಾದ ದೇವರುಗಳಲ್ಲಿ ಒಬ್ಬ. ಜಾತಿ ಜನಾಂಗಗಳ ಭೇದವಿಲ್ಲದೆ ಎಲ್ಲರಿಗೂ ಬೇಕಾದ ದೇವರು ಆತ. ಹನುಮಪ್ಪನಿಗೆ ಸಂಬಂಧಿಸಿದಂತೆ ಜೀವನಾವರ್ತನದಲ್ಲಿ ಮತ್ತು ವಾರ್ಷಿಕಾವರ್ತನದಲ್ಲಿ ಅನೇಕ ಆಚರಣೆಗಳು ನಡೆಯುತ್ತವೆ. ಗ್ರಾಮದ ಇತರ ದೈವಗಳಿಗಿಂತ ಹನುಮಂತನಿಗೆ ನಮ್ಮ ಜನಪದರು ನಾಯಕನ ಸ್ಥಾನ ಕೊಟ್ಟಿದ್ದಾರೆ. ಆತನ ಜಾತ್ರೆಯನ್ನು ಸಹ ಬಹು ವಿಜೃಂಭಣೆಯಿಂದ ಆಚರಿಸುತ್ತಾರೆ. ಹಿಂದುಳಿದ ವರ್ಗಗಳ ಎಷ್ಟೋ ಕುಟುಂಬಗಳಿಗೆ ಮನೆ ದೇವರು ಸಹ ಆಗಿದ್ದಾನೆ.

ಆಂಜನೇಯನಿಗೆ ಸಂಬಂಧಿಸಿದಂತೆ ನಡೆಯುವ ಆಚರಣೆಗಳಲ್ಲಿ 'ಮುಳ್ಳುಪವಾಡ'ಕ್ಕೆ ವಿಶಿಷ್ಟ ಸ್ಥಾನವಿದೆ. ಉತ್ತರ ಕರ್ನಾಟಕದ ಅನೇಕ ಹಳ್ಳಿಗಳಲ್ಲಿ ಇಂದಿಗೂ ಇದನ್ನು ನಡೆಸುತ್ತಾರೆ. ಈ ಆಚರಣೆ ಹನುಮಂತ ದೇವರಿಗೆ ಸಂಬಂಧಿಸಿದ್ದು. ಸಾಮಾನ್ಯವಾಗಿ ಮುಳ್ಳು ಪವಾಡ ನಡೆಯುವ ಎಲ್ಲಾ ಊರುಗಳಲ್ಲಿಯೂ ಹನುಪ್ಪನಗುಡಿ ಇದ್ದೇ ಇರುತ್ತದೆ. ಬಹಳ ಹಿಂದಿನ ಕಾಲದಿಂದಲೂ ಈ ಆಚರಣೆ ನಡೆದುಕೊಂಡು ಬಂದಿದೆ. ಆಚರಣೆಗಳಲ್ಲಿ ನಮ್ಮ ಜನಪದರಿಗೆ ನಂಬಿಕೆ ಇರುವುದರಿಂದ ಅವು ಇಂದಿಗೂ ಅಳಿಯದೆ ಉಳಿದುಕೊಂಡು ಬಂದಿವೆ.

ಪ್ರಸ್ತುತ ಸಂದರ್ಭದಲ್ಲಿ ಅನೇಕ ಆಚರಣೆಗಳು ತಮ್ಮ ಮಹತ್ವವನ್ನು ಕಳೆದುಕೊಳ್ಳುತ್ತಿವೆ. ದೈವಗಳ ಬಗೆಗಿನ ನಂಬಿಕೆಗಳು ಕಡಿಮೆಯಾಗುತ್ತಿವೆ. ದೈವಕ್ಕೆ ಸಂಬಂಧಿಸಿದ ಅನೇಕ ಆಚರಣೆಗಳು ಕಡಿಮೆಯಾಗತೊಡಗಿವೆ. ಮನುಷ್ಯ ಬದಲಾದಂತೆ ಆಚರಣೆಗಳಲ್ಲಿ ಬದಲಾವಣೆಗಳಾಗುತ್ತಿವೆ. ಅನೇಕ ದಿನಗಳವರೆಗೆ ಆಚರಿಸುವ ಆಚರಣೆಗಳನ್ನು ಕೆಲವೇ ದಿನಗಳಲ್ಲಿ ಆಚರಿಸುವ ಸ್ಥಿತಿ ಬಂದೊದಗಿದೆ. ಜಾತ್ರೆಯ ಸಂದರ್ಭಗಳಲ್ಲಿ ಸೇರುವ ಜನರ ಸಂಖ್ಯೆ ಸಹ ಕಡಿಮೆಯಾಗುತ್ತಿದೆ. ಆದರೆ ಗ್ರಾಮಾಂತರ ಪ್ರದೇಶದಲ್ಲಿನ ಜನರು ಇಂದಿಗೂ ದೈವಗಳಿಗೆ ಸಂಬಂಧಿಸಿದ ಆಚರಣೆಗಳನ್ನು ವ್ಯತ್ಯಾಸವಾಗದ ಹಾಗೆ ನಡೆಸುತ್ತಾ ಬಂದಿದ್ದಾರೆ.

ಹನುಮಂತ ದೇವರಿಗೆ ಸಂಬಂಧಿಸಿದಂತೆ 'ಮುಳ್ಳುಪವಾಡ'ಗಳಂತಹ ಅನೇಕ ಆಚರಣೆಗಳು ಇಂದು ಅರ್ಥಕಳೆದುಕೊಳ್ಳುತ್ತಿವೆ. ನಗರೀಕರಣದ ದಾಳಿ ಮತ್ತು ಇಂಗ್ಲೀಷ್ ಶಿಕ್ಷಣದ ಪ್ರಭಾವಗಳ ಅಡಿಯಲ್ಲಿ ಇಂಥ ಅನೇಕ ಜನಪದ ಆಚರಣೆಗಳು ಕುಸಿಯುತ್ತಿವೆ. ಮುಳ್ಳುಪವಾಡವು ಹನುಮಪ್ಪನ ಗುಡಿ ಇರುವ ಎಲ್ಲ ಹಳ್ಳಿಗಳಲ್ಲಿಯೂ ಹಿಂದೆ ನಡೆಯುತ್ತಿತ್ತೆಂದು ಊಹಿಸಬಹುದಾದರೂ ಇಂದು ಕೆಲವು ಊರುಗಳಲ್ಲಿ ಮಾತ್ರ ನಡೆಯುತ್ತಿದೆ. ಜನರ ಅಸ್ಪಷ್ಟವಾದ ಭಕ್ತಿ ಭಾವವನ್ನು ಬಿಟ್ಟರೆ ಪವಾಡ ನಡೆಸುವ ಪೂಜಾರಪ್ಪನಿಗೆ ಹೆಚ್ಚಿನ ಲಾಭವೇನೂ ಇರುವುದಿಲ್ಲ. ವರ್ಷದುದ್ದಕ್ಕೂ ಪವಾಡ ನಡೆಸಿಯೂ ಆತ ಬಡತನಕ್ಕಂಟಿಕೊಂಡು ಇರುವುದು ಹೆಚ್ಚು. ಮೇಲಾಗಿ ಆತನಿಗೆ ನಿರ್ಬಂಧಗಳು ಅಧಿಕ. ಪೂಜಾರಪ್ಪನಲ್ಲಿ ದುಶ್ಚಟಗಳನ್ನು ಜನ ಸಹಿಸುವುದಿಲ್ಲ. ಇಷ್ಟೆಲ್ಲಾ ನಿರ್ಬಂಧಗಳ ಮಧ್ಯೆ ಆತ ಪವಾಡ ಮಾಡಿದರೂ, ಆತ ಪವಾಡ ಮಾಡುವ ಸಂದರ್ಭದಲ್ಲಿ ಮಾತ್ರ ನಮ್ಮ ಜನರು ಭಕ್ತಿ ಗೌರವದಿಂದ ಕಾಣುತ್ತಾರೆ. ಬೇರೆ ಸಂದರ್ಭದಲ್ಲಿ ಆತನನ್ನು ಸಾಮಾನ್ಯ ಮನುಷ್ಯನಂತೆ ಕಾಣುತ್ತಾರೆ. ನಮ್ಮ ಜನಪದರು ಮನುಷ್ಯನಿಗಿಂತ ದೈವಕ್ಕೆ ಹೆಚ್ಚಿನ ಗೌರವ ಕೊಡುತ್ತಾರೆ. ಹಿಂದೆ ಬಹಳ ಹಳ್ಳಿಗಳಲ್ಲಿ ಈ ಆಚರಣೆ ನಡೆದಿದ್ದು ಪ್ರಸ್ತುತ ಸಂದರ್ಭದಲ್ಲಿ ಕೆಲವು ಊರುಗಳಲ್ಲಿ ಮಾತ್ರ ನಡೆಯುತ್ತಿದೆ. ಬರುಬರುತ್ತಾ ಈ ಆಚರಣೆ ಕಡಿಮೆಯಾಗುತ್ತದೆ ಎಂಬ ಅನುಮಾನ ಬರುವುದು ಸಹಜ. ಆದರೆ ಇಂತಹ ವಿಶಿಷ್ಟವಾದ ಜನಪದ ಆಚರಣೆಗಳನ್ನು ಉಳಿಸಿಕೊಂಡು ಹೋಗುವ ಜವಾಬ್ದಾರಿ ನಮ್ಮ ಜನಪದರ ಕೈಯಲ್ಲಿದೆ.

ಕಡಲಬಾಳು ಆಂಜನೇಯಸ್ವಾಮಿಯ ಸಾಂಸ್ಕೃತಿಕ ಅಧ್ಯಯನದಿಂದ ಹಲವಾರು ವಿಶೇಷಗಳು ತಿಳಿಯುತ್ತವೆ. ಸಂಶೋಧನಾ ಅಧ್ಯಯನದಿಂದ ಅಂತಹ ವಿಶೇಷಗಳನ್ನು ಕಂಡುಕೊಳ್ಳಲಾಗಿದೆ. ಅವುಗಳನ್ನು ಕೆಳಗೆ ನೀಡಲಾಗಿದೆ.

- ಮೂಲತಃ ಆಂಜನೇಯ ದ್ರಾವಿಡರ ದೈವ. ಆದರೆ ವೈದಿಕರು ಇಂದು ಅನೇಕ ಕಡೆ ತಮ್ಮ ಆರಾಧ್ಯ ದೇವರೆಂದು ಪೂಜಿಸುತ್ತಾರೆ.
- ಮುಳ್ಳುಪವಾಡ ನಮ್ಮ ಸಂಸ್ಕೃತಿಯಲ್ಲಿ ಬೆಳೆದದ್ದು ಶೈವರಿಂದ ಆದರೆ ದ್ರಾವಿಡರ ದೈವವಾದ ಆಂಜನೇಯನಿಗೂ ಈ ಆಚರಣೆಯಿರುವುದು ವಿಶೇಷ ಆಗಿದೆ.
- ಆಂಜನೇಯಸ್ವಾಮಿ ಪೌರಾಣಿಕ ಚರಿತ್ರೆಯಂತೆ ಬ್ರಹ್ಮಚಾರಿ. ಆದರೆ ಇಲ್ಲಿಯ ಒಂದು ಆಚರಣೆಯಲ್ಲಿ ಮದುವೆಗೆ ಮುನ್ನ ವಾಲ್ಮೀಕಿ ಜನಾಂಗದವರಿಗೆ ಶಂಖ-ಚಕ್ರದ ಮುದ್ರೆಯನ್ನು ಹಾಕುತ್ತಾರೆ. ಇದು ಕಡ್ಡಾಯವೂ ಆಗಿದೆ.
- ಆಂಜನೇಯ ಸ್ವಾಮಿಗೆ ದೇವದಾಸಿಯರನ್ನು ಬಿಡುವ ಸಂಪ್ರದಾಯವಿದೆ. ಇದು ಮಹತ್ವದ ಅಂಶ ಆಗಿದೆ.
- ದುರುಗಮ್ಮ, ಊರಮ್ಮ ಎಂಬ ಹೆಣ್ಣು ದೇವತೆಗಳಿಗೆ ಮತ್ತು ಕೆಳ ವರ್ಗಗಳು ಪೂಜಿಸುವ ದೈವಗಳಿಗೆ ಆಂಜನೇಯನ ಸಂಬಂಧ (ದುರುಗಮ್ಮ, ಊರಮ್ಮ ಆಂಜನೇಯನ ತಂಗಿಯರು) ಕಲ್ಪಿಸಿ ಆಚರಣೆ ಮಾಡುತ್ತಿರುವುದು ವಿಶೇಷವಾಗಿದೆ.

- ಕೊಂಡ ಹಾಯುವುದು ಕೂಡ ಶೈವ ಸಂಪ್ರದಾಯದ ಸೃಷ್ಠಿ. ಆದರೆ ಆಂಜನೇಯ ಸ್ವಾಮಿಗೆ ಈ ರೀತಿಯ ಆಚರಣೆಯನ್ನು ಮಾಡುತ್ತಿರುವುದು ವಿಶೇಷವಾಗಿದೆ. ಬೇರೆ ಕಡೆ ಆಂಜನೇಯ ಸ್ವಾಮಿಯ ಜಾತ್ರಾ ಸಂದರ್ಭದಲ್ಲಿ ಅಗ್ನಿಕೊಂಡ ನಡೆಯುವುದು ತುಂಬಾ ವಿರಳ.
- ಆಂಜನೇಯ ಸ್ವಾಮಿಗೆ ಸಂಬಂಧಿಸಿದ ನಮ್ಮ ನಾಡಿನಲ್ಲಿ ಆಚರಣೆಗಳು ನಡೆಯುವುದು ತುಂಬ ಕಡಿಮೆ. ಅದರಲ್ಲಿ ಈ ಬಗೆಯ ಆಚರಣೆಗಳು ತುಂಬ ಮಹತ್ವ ಪಡೆದುಕೊಳ್ಳುತ್ತವೆ.

ಕಡಲಬಾಳು ಆಂಜನೇಯಸ್ವಾಮಿಯ ಜಾತ್ರೆಯು ಸಂಪೂರ್ಣವಾಗಿ ರಾಮಾಯಣದ ಕೆಲವು ಪ್ರಮುಖ ಘಟನೆಗಳನ್ನು ಅವಲಂಬಿಸಿ ನಡೆಯುತ್ತದೆ. ಇದು ಯಾವುದೇ ರೀತಿಯ ಉತ್ಸವ, ಜಾತ್ರೆಯಾಗಿರದೆ ರಾಮಾಯಣದ ಕಥೆಯು ಒಂದೊಂದು ಪ್ರಮುಖ ಘಟನೆಯ ಸಾಂಕೇತಿಕ ರೂಪವಾಗಿ ಈ ಆಚರಣೆಗಳು ನಡೆಯುತ್ತಿರುವುದು ವಿಶೇಷ. ಆ ಘಟನೆಯ ಸಾಂಕೇತಿಕ ರೂಪಗಳ ಕೆಲವು ಮಾದರಿ ಹೀಗಿವೆ.

೧. ಜಾತ್ರೆಯಲ್ಲಿನ ರಥೋತ್ಸವ - ರಾಮಸೀತೆಯರ ವಿವಾಹ ನಂತರದ ಮೆರವಣಿಗೆಯ ಸಂಕೇತವಾಗಿದೆ.

೨. ಬೇಟೆ ಗಿಡ ಹಿಡಿದು ಕುಣಿಯುವುದು - ಆಂಜನೇಯ ಸಂಜೀವಿನಿ ಗಿಡವನ್ನು ತಂದುದರ ಸಂಕೇತವಾಗಿದೆ.

೩. ಓಕಳಿಹೊಂಡ ಹಾರುವುದು - ಆಂಜನೇಯ ಸಮುದ್ರವನ್ನು ಹಾರುವುದರ ಸಂಕೇತವಾಗಿದೆ.

ಹೀಗೆ ಗ್ರಾಮದೈವಗಳ ಆಚರಣಾತ್ಮಕ ಅಧ್ಯಯನದಿಂದ ಜನಪದ ಜೀವನದ ಸಾಂಸ್ಕೃತಿಕ ಸ್ಥಿತ್ಯಂತರಗಳನ್ನು ತಿಳಿದುಕೊಳ್ಳಬಹುದು. ಹಲವು ಕಾರಣಗಳಿಂದಾಗಿ ಗ್ರಾಮ ಸಂಸ್ಕೃತಿಯು ಸಂಸ್ಕೃತೀಕರಣ ಗೊಂಡುದನ್ನು ಮತ್ತು ಶಿಷ್ಟ ಸಂಸ್ಕೃತಿಯತ್ತ ಹೊರಳುತ್ತಿರುವುದನ್ನು ನಾವು ಪ್ರಸ್ತುತ ಸಂದರ್ಭದಲ್ಲಿ ಮನಗಾಣಬಹುದಾಗಿದೆ.

ಈ ರೀತಿಯಾಗಿ ಇಡೀ ಅಧ್ಯಯನವನ್ನು ಅವಲೋಕಿಸಿದಾಗ ಆಂಜನೇಯಸ್ವಾಮಿ ಆಚರಣೆಯ ಬಗೆಗೆ ಕಂಡು ಬಂದ ವಿಶೇಷ ಅಂಶಗಳಿವು. ಇತರೆ ಪ್ರಾದೇಶಿಕ ದೈವಗಳಿಗಿಂತ ಈ ದೈವದ ಆಚರಣೆಯು ವಿಶೇಷವಾಗಿದೆಯೆಂದು ಹೇಳಬಹುದು. ಈ ಮೇಲಿನ ಅಂಶಗಳೆಲ್ಲ ಈ ಅಧ್ಯಯನದ ಮುಖ್ಯ ಫಲಿತಗಳಾಗಿ ತೋರಿ ಬಂದಿವೆ.

# ಅನುಬಂಧ

೧. ವಕ್ತೃ ವಿವರ

೨. ಗ್ರಂಥ ಋಣ

೩. ಶ್ರೀ ಆಂಜನೇಯ ಸ್ವಾಮಿ ರಥೋತ್ಸವದ ಆಹ್ವಾನ ಪತ್ರಿಕೆ

೪. ಛಾಯ ಚಿತ್ರಗಳ ವಿವರಣೆ

೫. ಛಾಯ ಚಿತ್ರಗಳು

## ೧. ವಕ್ತೃ ವಿವರ

| ಕ್ರ.ಸಂ. | ಹೆಸರು | ವಯಸ್ಸು | ವಿದ್ಯಾಭ್ಯಾಸ | ವೃತ್ತಿ | ಜಾತಿ | ವಾಸ್ತುಸ್ಥಳ |
|---|---|---|---|---|---|---|
| ೧. | ಕನ್ನೆಪ್ಪ ಬ್ಯಾಟಿ | ೪೨ | ಇಲ್ಲ | ಕೃಷಿ | ವಾಲ್ಮೀಕಿ | ಕಡಲಬಾಳು |
| ೨. | ಕುಲ್ಲಪ್ಪ ಬ್ಯಾಟಿ | ೮೩ | ಇಲ್ಲ | ಕೃಷಿ | ವಾಲ್ಮೀಕಿ | ಕಡಲಬಾಳು |
| ೩. | ಗಿಡ್ಡಪ್ಪ ಬ್ಯಾಟಿ | ೬೧ | ಇಲ್ಲ | ಕೃಷಿ | ವಾಲ್ಮೀಕಿ | ಕಡಲಬಾಳು |
| ೪. | ಗುರುಬಸವನಗೌಡ.ಪಿ. | ೮೬ | ೬ನೇ ತರಗತಿ | ಗೌಡಕಿ | ಲಿಂಗಾಯಿತ | ಕಡಲಬಾಳು |
| ೫. | ಚಾರೆಪ್ಪ ಮಲ್ಲಿನಕೇರಿ | ೭೦ | ಇಲ್ಲ | ಕೂಲಿ | ಆದಿಕರ್ನಾಟಕ | ಕಡಲಬಾಳು |
| ೬. | ಜಲಜಾ ಗಂಗೂರ್ | ೬೨ | ೭ನೇ ತರಗತಿ | ಗೃಹಿಣಿ | ಬ್ರಾಹ್ಮಣ | ಹೊಸಪೇಟೆ |
| ೭. | ತಿಪ್ಪಮ್ಮ ಕಾವಲಿ | ೪೮ | ಇಲ್ಲ | ಕೂಲಿ | ಆದಿಕರ್ನಾಟಕ | ಕಡಲಬಾಳು |
| ೮. | ತಿಮ್ಮಮ್ಮ ಒಂಟೇರು | ೪೭ | ಇಲ್ಲ | ಕೂಲಿ | ಆದಿಕರ್ನಾಟಕ | ಕಡಲಬಾಳು |
| ೯. | ದೇವಮ್ಮ ಚಾಕರಿ | ೪೬ | ಇಲ್ಲ | ಕೂಲಿ | ಆದಿಕರ್ನಾಟಕ | ಕಡಲಬಾಳು |
| ೧೦. | ದೊಡ್ಡಮಾಯಮ್ಮ.ಪಿ. | ೫೦ | ಇಲ್ಲ | ಕೂಲಿ | ಆದಿಕರ್ನಾಟಕ | ಕಡಲಬಾಳು |
| ೧೧. | ದೊಡ್ಡಬಸಯ್ಯ ಅಂಗಡಿ | ೩೨ | ೧೦ನೇ ತರಗತಿ | ವ್ಯಾಪಾರ | ವೀರಶೈವ | ಕಡಲಬಾಳು |
| ೧೨. | ಪಕ್ಕೀರಮ್ಮ ಗೋಣೆಪ್ಪನವರ | ೫೫ | ಇಲ್ಲ | ಕೂಲಿ | ಆದಿಕರ್ನಾಟಕ | ಕಡಲಬಾಳು |
| ೧೩. | ಬಾಳಪ್ಪ ಬ್ಯಾಟಿ | ೬೫ | ಇಲ್ಲ | ಕೃಷಿ | ವಾಲ್ಮೀಕಿ | ಕಡಲಬಾಳು |
| ೧೪. | ಭೀಮಪ್ಪ ಪೂಜಾರು | ೫೦ | ಇಲ್ಲ | ಕೂಲಿ | ವಾಲ್ಮೀಕಿ | ಕಡಲಬಾಳು |
| ೧೫. | ಮರಿಯಮ್ಮ ಎಲ್ಲಾರಿ | ೬೩ | ಇಲ್ಲ | ಕೂಲಿ | ಆದಿಕರ್ನಾಟಕ | ಕಡಲಬಾಳು |
| ೧೬. | ಮಲ್ಲೇಶ ಬ್ಯಾಟಿ | ೨೮ | ಪಿ.ಯು:ಸಿ. | ಗುಮಾಸ್ತ | ವಾಲ್ಮೀಕಿ | ಕಡಲಬಾಳು |
| ೧೭. | ಮಾಯಪ್ಪ ಪೂಜಾರು | ೪೦ | ಇಲ್ಲ | ಪೂಜಾರಿ | ಆದಿಕರ್ನಾಟಕ | ಕಡಲಬಾಳು |
| ೧೮. | ರಾಷ್ಟ್ರಪತಿ ಪೂಜಾರು | ೪೩ | ೬ನೇ ತರಗತಿ | ಕೃಷಿ | ವಾಲ್ಮೀಕಿ | ಕಡಲಬಾಳು |
| ೧೯. | ಲಕ್ಷ್ಮೀಕಾಂತಪ್ಪ ಪೂಜಾರು | ೫೯ | ೭ನೇ ತರಗತಿ | ಕೃಷಿ | ವಾಲ್ಮೀಕಿ | ಕಡಲಬಾಳು |
| ೨೦. | ವೆಂಕಟಸ್ವಾಮಿ ಪೂಜಾರು | ೬೦ | ೩ನೇ ತರಗತಿ | ಕೃಷಿ | ವಾಲ್ಮೀಕಿ | ಕಡಲಬಾಳು |
| ೨೧. | ಶ್ರೀನಿವಾಸಪ್ಪ ಪವಾಡದ | ೫೨ | ೪ನೇ ತರಗತಿ | ಕೃಷಿ | ಪದ್ಮಶಾಲಿ | ಕಡಲಬಾಳು |
| ೨೨. | ಹನುಮಂತಪ್ಪ ಬ್ಯಾಟಿ | ೪೫ | ೩ನೇ ತರಗತಿ | ಕೃಷಿ | ವಾಲ್ಮೀಕಿ | ಕಡಲಬಾಳು |
| ೨೩. | ಹಂಪಮ್ಮ ನೇವಾರು | ೭೫ | ಇಲ್ಲ | ಗೃಹಿಣಿ | ಪದ್ಮಶಾಲಿ | ಕಡಲಬಾಳು |

## ೨. ಗ್ರಂಥಋಣ


೧. ಅರ್ಜುನ.ಯ. ಗೊಳಸಂಗಿ - ೧೯೯೫. ಗೊಳಸಂಗಿಗ್ರಾಮ ಒಂದು ಸಾಂಸ್ಕೃತಿಕ ಅಧ್ಯಯನ. ಮಲ್ಲಿಕಾರ್ಜುನ ಪ್ರಕಾಶನ, ಗೊಳಸಂಗಿ.

೨. ಕಿಟೆಲ್ ಆರ್.ಎಫ್ - ೧೯೯೯. ಕನ್ನಡ ಇಂಗ್ಲೀಷ್ ಡಿಕ್ಷನರಿ. ಏಷ್ಯಾನ್ ಎಜುಕೇಷನಲ್ ಸರ್ವಿಸ್, ನ್ಯೂಡೆಲ್ಲಿ.

೩. ಗಣಪತಿ ಭಟ್ ಪಿ. - ೧೯೮೯. ತುಳುನಾಡಿನ ಜಾನಪದ ನಂಬಿಕೆಗಳು. (ಮಂಗಳೂರು ವಿಶ್ವವಿದ್ಯಾಲಯಕೆ ಒಪ್ಪಿಸಿದ ಎಂ.ಫಿಲ್ ಪ್ರೌಢ ಪ್ರಬಂಧ).

೪. ಗೋವಿಂದಾಚಾರ್ಯ ಪಂಡಿತ ಚಿಕ್ಕೇರೂರು - ಶ್ರೀ ಕಡಲಬಾಳು ರಾಯರ ಚರಿತ್ರೆ. ಕಡಲಬಾಳು ಮಾಧವಮೂರ್ತಿ ಆಚಾರ್ಯ ಜಗದಾನಿ ಮತ್ತು ಸಹೋದರರು ಬಳ್ಳಾರಿ.

೫. ಗೋವಿಂದರಾಜು.ಟಿ. - ೧೯೯೩. ಚೆನ್ನಾದೇವಿ ಅಗ್ರಹಾರ-ಜಾನಪದೀಯ ಅಧ್ಯಯನ. ಪುಸ್ತಕ ಜೇನು, ಚೆನ್ನಾದೇವಿ ಅಗ್ರಹಾರ.

೬. ಚಂದ್ರಶೇಖರ ಕಂಬಾರ(ಸಂ) - ೧೯೮೫. ಕನ್ನಡ ಜಾನಪದ ವಿಶ್ವಕೋಶ ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೭. ಚೆನ್ನಬಸವನಗೌಡ.ಕೆ. - ೧೯೯೪. ನಾನೊಬ್ಬ ಸಾರ್ವಜನಿಕ (ಆತ್ಮಕಥೆ) ಕನ್ನಡ ಸಾಹಿತ್ಯ ಪರಿಷತ್ತು, ಹಗರಿಬೊಮ್ಮನಹಳ್ಳಿ.

೮. ಜಯತೀರ್ಥರಾಜ ಪುರೋಹಿತ- ೧೯೭೪. ವ್ಯಾಸರಾಯರು ಪ್ರಸಾರಂಗ. ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೯. ದಾಸೇಗೌಡ.ಜಿ.ವಿ. - ೧೯೭೩. ನಮ್ಮ ಜನಪದ ನಂಬಿಕೆಗಳು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೧೦. ದಾಸೇಗೌಡ.ಜಿ.ವಿ. - ೧೯೭೮. ಕನ್ನಡ ಐತಿಹ್ಯಗಳು ತೇಜಸ್ವಿನಿ ಪ್ರಕಾಶನ, ಮೈಸೂರು.

೧೧. ನಾಗರಾಜಯ್ಯ ಹಂಪಾ - ೧೯೮೫. ಕರ್ನಾಟಕದ ಜಾತ್ರೆಗಳು
ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೨. ಪ್ರಹ್ಲಾದಾಚಾರ್ಯ.ಕೆ. - ೧೯೮೮. ಕಡಲಬಾಳು ರಾಯರ ಚರಿತ್ರೆ
ಜಗದಾನಿ ಪ್ರಕಾಶನ, ಹೊಸಪೇಟೆ.

೧೩. ಪುರುಷೋತ್ತಮ ಬಿಳಿಮಲೆ - ೧೯೯೯. ಹುಲಿಗೆಮ್ಮ
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೪. ಭಟ್.ಜಿ.ಎಸ್.(ಸಂ) - ೧೯೯೩. ಜಾನಪದ ೧೯೯೧
ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೧೫. ಬೋರಲಿಂಗಯ್ಯ.ಹಿ.ಚಿ. - ೧೯೭೯. ಉಜ್ಜನಿ ಚೌಡಮ್ಮ
ದಿನಕರ ಪ್ರಕಾಶ, ಬೆಂಗಳೂರು.

೧೬. ಮಂಜುನಾಥ ಬೇವಿನಕಟ್ಟಿ - ೧೯೯೪. ಮಲಿಯಮ್ಮ ನಿನ್ನಾಲ್ಕುದೋ...ಉದೋ...
ಅಂಬಿಕಾ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್, ಹೊಸಪೇಟೆ.

೧೭. ರಾಜಶೇಖರ ಜಮದಂಡಿ - ೧೯೯೬. ಹೊಸೂರಮ್ಮ-ಸಾಂಸ್ಕೃತಿಕ ಅಧ್ಯಯನ
(ಕನ್ನಡ ವಿಶ್ವವಿದ್ಯಾಲಯಕ್ಕೆ ಒಪ್ಪಿಸಿದ ಎಂ.ಫಿಲ್. ಸಂಪ್ರಬಂಧ).

೧೮. ಲಕ್ಕಪ್ಪಗೌಡ.ಹೆಚ್.ಜೆ (ಸಂ) - ೧೯೯೭. ಜಾನಪದ ಕೈಪಿಡಿ
ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೧೯. ಲಕ್ಕಪ್ಪಗೌಡ.ಹೆಚ್.ಜೆ. (ಸಂ) - ೧೯೯೮. ಸುವರ್ಣ ಜಾನಪದ
ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೨೦. ಲಕ್ಷ್ಮಣ್ ತೆಲಗಾವಿ (ಸಂ) - ೧೯೯೧. ಸಂಶೋಧನೆ
ಡಾ.ಎಂ. ಚಿದಾನಂದ ಮೂರ್ತಿ ಅಭಿನಂದನ ಸಮಿತಿ, ಬೆಂಗಳೂರು.

೨೧. ಲಿಂಗಯ್ಯ.ಡಿ. - ೧೯೮೪. ಕರ್ನಾಟಕದ ಗ್ರಾಮದೇವತೆಗಳು
ಐಬಿಹೆಚ್ ಪ್ರಕಾಶನ, ಬೆಂಗಳೂರು.

೨೨. ವೀರಣ್ಣ ದಂಡೆ - ೧೯೯೩. ಕನ್ನಡ ಜಾನಪದ ಪ್ರಜ್ಞೆ
ಕವಿಮಾರ್ಗ ಪ್ರಕಾಶನ, ಕಲಬುರ್ಗಿ.

೨೩. ಶಂಕರನಾರಾಯಣ.ತೀ.ನಂ. - ೧೯೮೯. ಕೊಂಡ ಹಾಯುವ ಸಂಪ್ರದಾಯ
ಪ್ರಾದೇಶಿಕ ಜಾನಪದ ರಂಗಕಲೆಗಳ
ಅಧ್ಯಯನ ಕೇಂದ್ರ, ಉಡುಪಿ.

೨೪. ಸುಜಾತ ಅಕ್ಕಿ - ೨೦೦೧. ತಂಬ್ರಹಳ್ಳಿಯ ಬಂಡೆ ರಂಗನಾಥೇಶ್ವರ
ಜಾತ್ರೆ- ಜಾನಪದೀಯ ಅಧ್ಯಯನ.
(ಮೈಸೂರು ವಿಶ್ವವಿದ್ಯಾಲಯಕ್ಕೆ ಒಪ್ಪಿಸಿದ ಜಾನಪದ
ಸ್ನಾತಕೋತ್ತರ ಪರೀಕ್ಷೆಗಾಗಿ ಸಾದರ ಪಡಿಸಿದ
ಕಿರುಪ್ರಂಬಂಧ).

೨೫. ಹಿರೇಮಠ.ಎಸ್.ಎಸ್. - ೧೯೯೩ ಜಾತ್ರೆಗಳು
ಸಮತಾ ಪ್ರಕಾಶನ, ಹೊಸಪೇಟೆ.

## ಸಂಪಾದಿತ ಗ್ರಂಥಗಳು ಮತ್ತು ಸ್ಮರಣ ಸಂಚಿಕೆಗಳು

೧. ಕರ್ನಾಟಕ ದೇವಾಲಯ ಕೋಶ ಬಳ್ಳಾರಿ ಜಿಲ್ಲೆ (ಸಂ) - ೧೯೯೯. ಪ್ರಸಾರಾಂಗ.
ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨. ಕರ್ನಾಟಕ ಗ್ರಾಮದೇವತೆಗಳು 'ಪ್ರಶ್ನಾವಳಿ' - ಜಾನಪದ ಅಧ್ಯಯನ ವಿಭಾಗ.
ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩. ಗವಿದೀಪ್ತಿ (ಸಂ) - ೧೯೭೬. ಶ್ರೀ ಗವಿಸಿದ್ದೇಶ್ವರ
ಕೃಪಾಪೋಷಿತ ವಿದ್ಯಾರ್ಥಿ ಬಳಗ,
ಗವಿಮಠ, ಕೊಪ್ಪಳ.

೪. ಸಂಕ್ಷಿಪ್ತ ಕನ್ನಡ ನಿಘಂಟು. - ೧೯೭೫. ಕನ್ನಡ ಸಾಹಿತ್ಯ ಪರಿಷತ್ತು,
ಬೆಂಗಳೂರು.

೫. ಸೂರ್ಯಕಾಂತಿ, ಸ್ಮರಣ ಸಂಚಿಕೆ - ೧೯೯೩. ಕನ್ನಡ ಸಾಹಿತ್ಯ ಪರಿಷತ್ತು,
ಹಗರಿಬೊಮ್ಮನಹಳ್ಳಿ.

॥ ಜೈ ಶ್ರೀ ಮಾರುತಿ ಪ್ರಸನ್ನ ॥



ಬುದ್ಧಿರ್ಬಲಂ ಯಶೋಧೈರ್ಯಂ ।
ನಿರ್ಭಯತ್ವಂ ಅರೋಗತಾಂ ॥







ಅಜಾಡ್ಯಂ ವಾಕ್ಪಟುತ್ವಂಚ ।
ಹನುಮಾತ್ ಸ್ಮರಣಾದ್ಭವೇತ್ ॥



ಬಳ್ಳಾರಿ ಜಿಲ್ಲೆ ಹಗರಿಬೊಮ್ಮನಹಳ್ಳಿ ತಾಲೂಕು **ಕಡಲಬಾಳು** ಗ್ರಾಮದ

# ಶ್ರೀ ಆಂಜನೇಯ ಸ್ವಾಮಿಯ ರಥೋತ್ಸವದ



## ಆಹ್ವಾನ ಪತ್ರಿಕೆ



ಸ್ವಸ್ತಿ ಶ್ರೀ ವಿಜಯಾಭ್ಯುದಯ ಶ್ರೀ ಮನ್ನೃಪ ಶಾಲಿವಾಹನ ಶಕೆ 1924 ನೇ ಚಿತ್ರಭಾನು ಸಂವತ್ಸರದ ಚೈತ್ರ ಶುದ್ಧ ಪಂಚಮಿ ದಿನಾಂಕ 18-04-2002 ನೇ ಗುರುವಾರ ದಿವಸ ಪ್ರತಿವರ್ಷದ ಪದ್ಧತಿಯಂತೆ " ಶ್ರೀ ಆಂಜನೇಯ ಸ್ವಾಮಿಯ ರಥೋತ್ಸವ " ವು ಈ ವರ್ಷವು ಬಹು ವಿಜೃಂಭಣೆಯಿಂದ ಜರುಗುವುದು. ಕಾರಣ ಸರ್ವ ಭಕ್ತಾದಿಗಳು ಸ್ವಾಮಿಯ ಕೃಪಾಶೀರ್ವಾದಕ್ಕೆ ಪಾತ್ರರಾಗಬೇಕೆಂದು ವಿನಂತಿ.

### ಕಾರ್ಯಕ್ರಮಗಳು :

ಚೈತ್ರಶುದ್ಧ ಪಾಡ್ಯ ದಿನಾಂಕ 13-04-2002 ನೇ ಶನಿವಾರ ಬೆಳಿಗ್ಗೆ 9-00 ಗಂಟೆಗೆ

**ಶ್ರೀ ಹನುಮಾಧ್ವಜೋತ್ಸವದೊಂದಿಗೆ**

ಜಾತ್ರಾ ಕಾರ್ಯಕ್ರಮಗಳು ಪ್ರಾರಂಭ ನಂತರ ಸಾಯಂಕಾಲ 5-00 ಗಂಟೆಗೆ

**ಕಲಶೋತ್ಸವ.**

ಚೈತ್ರಶುದ್ಧ ಪಂಚಮಿ ದಿನಾಂಕ **18-04-2002** ನೇ ಗುರುವಾರ ಸಾಯಂಕಾಲ 5-00 ಗಂಟೆಗೆ

**" ರಥೋತ್ಸವ "**

ಚೈತ್ರಶುದ್ಧ ಷಷ್ಠಿ ದಿನಾಂಕ 19-04-2002 ನೇ ಶುಕ್ರವಾರ

ಬೆಳಿಗ್ಗೆ **ಅಗ್ನಿಕುಂಡ** — ಮಧ್ಯಾಹ್ನ 3-00 ಗಂಟೆಗೆ **ಮುಳ್ಳಿನ ಪವಾಡ**

ಚೈತ್ರಶುದ್ಧ ಸಪ್ತಮಿ ದಿನಾಂಕ 20-04-2002 ನೇ ಶನಿವಾರ

**ಕಡುಬಿನ ಕಾಳಗ** (ನಂತರ) **ಓಕುಳಿ**



ಈ ಹಿಂದಿನ 2000 ಮತ್ತು 2001 ರ
ಶ್ರೀ ಸ್ವಾಮಿಯ ಪಟಾಕ್ಷಿ ಹರಾಜು ಮಾಡಿದವರು
**ಶ್ರೀ ಅಂಗಡಿ ಕೊಟ್ರಪ್ಪ, ಕಡಲಬಾಳು.**

<u>ವಿಶೇಷ ಸೂಚನೆ :</u>

ದಿನಾಂಕ 18-04-2002 ನೇ ಗುರುವಾರ ಶ್ರೀ ಆಂಜನೇಯ ಸ್ವಾಮಿ ಪಟಾಕ್ಷಿ ಹರಾಜು ಇರುತ್ತದೆ. ಅಲ್ಲದೆ ಶ್ರೀ ಸ್ವಾಮಿಯ ದೇವಸ್ಥಾನದ ಜೀರ್ಣೋದ್ಧಾರ ಕಾರ್ಯಕ್ರಮ ಭಕ್ತಾದಿಗಳ ಸಹಾಯದಿಂದ ನಡೆಯುತ್ತಿದ್ದು. ಕಾಣಿಕೆ ನೀಡುವ ಭಕ್ತಾದಿಗಳು ಬಂದು ಕಾಣಿಕೆ ನೀಡಿ ರಸೀದಿ ಪಡೆದು ಸೇವೆಗೈದು ಸ್ವಾಮಿಯ ಕೃಪೆಗೆ ಪಾತ್ರರಾಗಬೇಕೆಂದು ವಿನಂತಿ. ಪರಸ್ಥಳದಿಂದ ಬರುವ ಭಕ್ತಾದಿಗಳಿಗೆ ತಮ್ಮ ಬಂಡಿ, ಟ್ರ್ಯಾಕ್ಟರ್ ಇತ್ಯಾದಿ ವಾಹನ ಬಿಡಲು ಗ್ರಾಮದ ಶಾಲೆಯ ಆವರಣದಲ್ಲಿ ಸ್ಥಳವಿದೆ. ಅಲ್ಲದೆ ವ್ಯಾಪಾರದಾರರಿಗೆ ಮಾರುತಿ ಸರ್ಕಲ್‌ನಲ್ಲಿ ಜಾಗದ ವ್ಯವಸ್ಥೆ ಇದೆ. ದೂರದ ಊರಿನಿಂದ ಬರುವ ಭಕ್ತಾದಿಗಳಿಗೆ ತಂಗಲು ಶಾಲೆಯಲ್ಲಿ ವ್ಯವಸ್ಥೆ ಮಾಡಲಾಗುತ್ತದೆ. ಹಗರಿಬೊಮ್ಮನಹಳ್ಳಿಯಿಂದ ಕಡಲಬಾಳಿಗೆ ಬಸ್ಸಿನ ಸೌಕರ್ಯವಿದೆ.

ಪತ್ರಿಕಾ ಸೇವಾ ಕಾರ್ಯ :
ಶ್ರೀ ಉಲುವತ್ತಿ ಚಂದ್ರಪ್ಪ ಮತ್ತು ಮಕ್ಕಳು.



ಇಂತಿ ತಮ್ಮ,
ಕಡಲಬಾಳು ಗ್ರಾಮದ ಸದ್ಭಕ್ತರು,
ಸುತ್ತಲಿನ ಗ್ರಾಮದ ಭಕ್ತಾದಿಗಳು
ಕಡಲಬಾಳು.

ಜ್ಯೋತಿ ಮುದ್ರಣ, ಹಗರಿಬೊಮ್ಮನಹಳ್ಳಿ. ದೂ. 20733.

## ೪. ಛಾಯಾ ಚಿತ್ರಗಳ ವಿವರಣೆ

೧. ಶ್ರೀ ಆಂಜನೇಯಸ್ವಾಮಿ ದೇವಸ್ಥಾನ
೨. ಶ್ರೀ ಆಂಜನೇಯಸ್ವಾಮಿ
೩. ಶ್ರೀ ಆಂಜನೇಯಸ್ವಾಮಿ
೪. ಶ್ರೀ ಆಂಜನೇಯಸ್ವಾಮಿ ರಥ
೫. ಶ್ರೀ ರಾಮದೇವರ ಉತ್ಸವಮೂರ್ತಿ
೬. ಶ್ರೀ ಆಂಜನೇಯಸ್ವಾಮಿಯ ರಥೋತ್ಸವ
೭. ಅಗ್ನಿಕೊಂಡ ತುಳಿಯುವುದಕ್ಕೆ ಹೊರಟ ಭಕ್ತರು
೮. ಪವಾಡ ಪುರುಷ ಬಾಳಪ್ಪ
೯. ಅಗ್ನಿಕೊಂಡ ಪವಾಡ ಮಾಡುತ್ತಿರುವ ಬಾಳಪ್ಪ
೧೦. ಅಗ್ನಿಕೊಂಡ ಪ್ರವೇಶಿಸುತ್ತಿರುವ ಆಂಜನೇಯಸ್ವಾಮಿಯ ಪಾಲಕಿ
೧೧. ಅಗ್ನಿಕೊಂಡ ತುಳಿಯುತ್ತಿರುವ ಹನುಮಪ್ಪನ ದೇವದಾಸಿ
೧೨. ಆಂಜನೇಯ ಆವೇಶವಾಗಿ ಗರುಡಗಂಭದ ಕಟ್ಟೆಯ ಮೇಲೆ ಕುಣಿಯುತ್ತಿರುವ ಬಾಳಪ್ಪ
೧೩. ಆಂಜನೇಯ ಆವೇಶವಾಗಿ ಕುಣಿಯುತ್ತಿರುವ ಬಾಳಪ್ಪ
೧೪. ಕಾರಿಮುಳ್ಳುಗಳನ್ನು ಹರಡಿದ ಪಾಲಕಿ
೧೫. ಮುಳ್ಳು ಪಾಲಕಿಯಲ್ಲಿ ಮಲಗಿದ ಬಾಳಪ್ಪ
೧೬. ಬ್ಯಾಟಗಿಡ ಕುಣಿಯುತ್ತಿರುವುದು
೧೭. ಶ್ರೀ ರಾಘುವೇಂದ್ರಮಠ
೧೮. ಶ್ರೀ. ಶಿವಶಾಂತವೀರ ಸ್ವಾಮಿಗಳ (ಗಡ್ಡದಜ್ಜ) ಗದ್ದುಗೆ
೧೯. ಗ್ರಾಮದೇವತೆ ಶ್ರೀ ಊರಮ್ಮ
೨೦. ಶ್ರೀ ದುರುಗಮ್ಮ
೨೧. ಶ್ರೀ ಹುಲಿಗೆಮ್ಮ
೨೨. ಮುಸ್ಲಿಂ ಜನಾಂಗದ ಮಸೀದಿ
೨೩. ರಕ್ತಭೂತ, ಹಾಲುಭೂತ ಹಲಗೆಗಳು
೨೪. ಶ್ರೀ ಆಂಜನೇಯಸ್ವಾಮಿಯ ಪಾದರಕ್ಷೆಗಳು
೨೫. ಪವಾಡ ಪುರುಷ ಕಳಸಪ್ಪ (ದಾಸಯ್ಯ)ನ ಸಮಾಧಿ
೨೬. ಜನಪದ ಹಾಡುಗಾರರು



೫. ಶ್ರೀ ರಾಮದೇವರ ಉತ್ಸವಮೂರ್ತಿ



೬. ಶ್ರೀ ಆಂಜನೇಯಸ್ವಾಮಿಯ ರಥೋತ್ಸವ



೭. ಅಗ್ನಿಕೊಂಡ ತುಳಿಯುವುದಕ್ಕೆ ಹೊರಟ ಭಕ್ತರು



೮. ಪವಾಡ ಪುರುಷ ಬಾಳಪ್ಪ



೯. ಅಗ್ನಿಕೊಂಡ ಪವಾಡ ಮಾಡುತ್ತಿರುವ ಬಾಳಪ್ಪ



೧೦. ಅಗ್ನಿಕೊಂಡ ಪ್ರವೇಶಿಸುತ್ತಿರುವ ಆಂಜನೇಯಸ್ವಾಮಿಯ ಪಾಲಕಿ



೧೧. ಅಗ್ನಿಕೊಂಡ ತುಳಿಯುತ್ತಿರುವ ಹನುಮಪ್ಪನ ದೇವದಾಸಿ



೧೨. ಆಂಜನೇಯ ಆವೇಶವಾಗಿ ಗರುಡಗಂಭದ ಕಟ್ಟೆಯ ಮೇಲೆ ಕುಣಿಯುತ್ತಿರುವ ಬಾಳಪ್ಪ



೧೩. ಆಂಜನೇಯ ಆವೇಶವಾಗಿ ಕುಣಿಯುತ್ತಿರುವ ಬಾಳಪ್ಪ



೧೪. ಕಾರಿಮುಳ್ಳುಗಳನ್ನು ಹರಡಿದ ಪಾಲಕಿ



೧೫. ಮುಳ್ಳು ಪಾಲಕಿಯಲ್ಲಿ ಮಲಗಿದ ಬಾಳಪ್ಪ



೧೬. ಬ್ಯಾಟಿಗಿಡ ಕುಣಿಯುತ್ತಿರುವುದು



೧೭. ಶ್ರೀ ರಾಘವೇಂದ್ರಮಠ



೧೮. ಶ್ರೀ. ಶಿವಶಾಂತವೀರ ಸ್ವಾಮಿಗಳ (ಗಡ್ಡದಜ್ಜ) ಗದ್ದುಗೆ



೧೯. ಗ್ರಾಮದೇವತೆ ಶ್ರೀ ಊರಮ್ಮ



೨೦. ಶ್ರೀ ದುರುಗಮ್ಮ



೨೧. ಶ್ರೀ ಹುಲಿಗೆಮ್ಮ



೨೨. ಮುಸ್ಲಿಂ ಜನಾಂಗದ ಮಸೀದಿ



೨೩ ರಕ್ತಭೂತ, ಹಾಲುಭೂತ ಹಲಗೆಗಳು



೪. ಶ್ರೀ ಆಂಜನೇಯಸ್ವಾಮಿಯ ಪಾದರಕ್ಷೆಗಳು



೨೫. ಪವಾಡ ಪುರುಷ ಕಳಸಪ್ಪ (ದಾಸಯ್ಯ)ನ ಸಮಾಧಿ



೨೬. ಜನಪದ ಹಾಡುಗಾರರು